ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಪ್ರಸಕ್ತ ಪರಿಸ್ಥಿತಿಯಲ್ಲಿ ತಂದೆ ತಾಯಿಯರ ಬಗ್ಗೆ ಮಕ್ಕಳಿಗಿರುವ ಹೊಣೆಗಾರಿಕೆಗಳ ಬಗ್ಗೆ ಎಚ್ಚರಿಸಬೇಕಾದ ಅನಿವಾರ್ಯತೆಯ ಬಗ್ಗೆ ಯಾರಿಗೂ ಹೇಳಬೇಕಾಗಿಲ್ಲ. ಇತಿಹಾಸದಲ್ಲಿ ಕಂಡು ಕೇಳರಿಯದ ರೀತಿಯ ನಿರ್ಲಕ್ಷ್ಯ, ಅವಮಾನವನ್ನು ಮಾತಾಪಿತರು ಅನುಭವಿಸುತ್ತಿದ್ದಾರೆ. ಈಗಿನದು ಮಾತಾಪಿತರನ್ನು ಕ್ರೂರವಾಗಿ ಕೊಲೆಗೈಯಲೂ ಮಕ್ಕಳು ಹಿಂಜರಿಯದಂತಹ ಕಾಲವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ತಂದೆ ತಾಯಂದಿರ ಕುರಿತು ಮಕ್ಕಳಿಗಿರುವ ಹೊಣೆಗಾರಿಕೆಯನ್ನು ಎಚ್ಚರಿಸುವಂತಹ ಕಿರು ಪ್ರಯತ್ನವಾಗಿದೆ ಶೈಖ್ ಮುಹಮ್ಮದ್ ಕಾರಕುನ್ನು ಬರೆದಿರುವ 'ಮಾತಾಪಿತಾಕಳ್ ಸ್ವರ್ಗ ವಾದಿಲುಗಳ್' ಎಂಬ ಕೃತಿ. ಇದನ್ನು 'ಮಾತಾಪಿತರು ಸ್ವರ್ಗದ ಬಾಗಿಲು' ಎಂಬ ಹೆಸರಿನಲ್ಲಿ ಪತ್ರಕರ್ತ ಸಲೀಮ್ ಬೋಳಂಗಡಿಯವರು ಬಹಳ ಮನೋಜ್ಞವಾಗಿ ಅನುವಾದಿಸಿದ್ದಾರೆ.

ಕೃತಿಯ ಮೊದಲನೆಯ ಅಧ್ಯಾಯದಲ್ಲಿ ಮಾತಾಪಿತರ ಸ್ಥಾನಮಾನದ ಕುರಿತು ಎಚ್ಚರಿಸಿದರೆ ಎರಡನೆಯ ಅಧ್ಯಾಯದಲ್ಲಿ ಅವರು ಅನುಭವಿಸುತ್ತಿರುವ ಯಾತನೆಯನ್ನು ವಿವರಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಅವರು ಅನುಭವಿಸುತ್ತಿರುವ ಸಂಕಷ್ಟಗಳಿಗೆ ಕಾರಣಗಳೇನೆಂಬುದರ ಬಗ್ಗೆ ಬದುಕಿನ ದೃಷ್ಟಿಕೋನದಲ್ಲಿ ಚರ್ಚಿಸಲಾಗಿದೆ. ನಾಲ್ಕು ಮತ್ತು ಐದನೆಯ ಅಧ್ಯಾಯದಲ್ಲಿ ಮಾತಾಪಿತರ ಬಗ್ಗೆ ಇರುವ ಹೊಣೆಗಾರಿಕೆಯ ಕುರಿತು ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಆಧಾರದಲ್ಲಿ ವಿವರಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ಇತಿಹಾಸದ ಕೆಲ ಅನುಭವಗಳನ್ನೂ ಏಳನೆಯ ಅಧ್ಯಾಯದಲ್ಲಿ ನಮ್ಮೊಡನೆ ನಾವೇ ಕೇಳಬೇಕಾದ ಕೆಲವು ಪ್ರಶ್ನೆಗಳನ್ನೂ ಉದ್ಧರಿಸಲಾಗಿದೆ.

ಈ ಕಿರು ಕೃತಿಯಲ್ಲಿ ಮಾತಾಪಿತರ ಬಗ್ಗೆ ಇರುವ ಪ್ರೀತಿ ವಾತ್ಸಲ್ಯ, ಕರುಣೆ, ಜವಾಬ್ದಾರಿಕೆಯ ಪ್ರಜ್ಞೆಯನ್ನು ಓದುಗರಲ್ಲಿ ಬೆಳೆಸಲು ಹೆಚ್ಚು ಸಹಕಾರಿಯಾಗಬಹುದು. ಆದರಿಂದ ಅಲ್ಲಾಹನ ಕೋಪ ತಾಪ ಶಿಕ್ಷೆಯಿಂದ ಪಾರಾಗಲು ಮತ್ತು ದೇವ ಸಂಪ್ರೀತಿ ಗಳಿಸಲು ಸಹಾಯಕವಾಗಬಹುದೆಂದೂ ಭಾವಿಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ


- ಅಮ್ಮ ಎಂಬ ಕರುಣಾಸಾಗರ 05
- ಎಂತೆಂತಹಾ ಮಕ್ಕಳು 18
- ನಿರ್ಲಕ್ಷ್ಯಕ್ಕೆ ಕಾರಣಗಳನ್ನು ಹುಡುಕಿದಾಗ... 27
- ಮಾತೆ: ಪವಿತ್ರ ಕುರ್‌ಆನಿನಲ್ಲಿ 31
- ಪ್ರವಾದಿಚರ್ಯೆಯಲ್ಲಿ ಮಾತಾಪಿತರು 37
- ಇತಿಹಾಸದಲ್ಲಿ ಮಾತೆ 50
- ನಮ್ಮ ಸ್ವಯಂ ವಿಚಾರಣೆಗೆ ಕೆಲವು ಪಶ್ನೆಗಳು 62

# ಅಮ್ಮ ಎಂಬ ಕರುಣಾ ಸಾಗರ

ಮರೆಯಲಾಗದ ಮಾತೆಯ ಅಸಾಮಾನ್ಯವಾದ ತ್ಯಾಗದ ಕುರಿತು ಸುಪ್ರಸಿದ್ಧವಾದ ಕತೆಯೊಂದಿದೆ.

ಒಂದು ಮನೆಯಲ್ಲಿ ತಾಯಿ ಮತ್ತು ಮಗ ಮಾತ್ರ ವಾಸವಾಗಿದ್ದರು. ದೇಹ ಎರಡಾದರೂ ಒಂದೇ ಜೀವ ಎಂಬಷ್ಟು ಪ್ರೀತಿ ಅನ್ಯೋನ್ಯತೆ ಅವರಲ್ಲಿತ್ತು. ಅಂತಹ ಒಂದು ಪ್ರೀತಿ ವಾತ್ಸಲ್ಯದ ಬದುಕು ಅವರದ್ದಾಗಿತ್ತು. ಮಗನ ಮನದಲ್ಲಿ ಮಾತೆಯ ಚಿತ್ರ ಮಾತ್ರ ತುಂಬಿತ್ತು. ಆ ತಾಯಿಯ ಮನದಲ್ಲಿಯೂ ಆ ಏಕಮಾತ್ರ ಪುತ್ರನೇ ತುಂಬಿದ್ದನು. ಅವರು ಜೊತೆಯಾಗಿಯೇ ಆಹಾರ ಸೇವಿಸುತ್ತಿದ್ದರು. ಜೊತೆಯಾಗಿಯೇ ನಿದ್ರಿತ್ತಿದ್ದರು. ಹೀಗೆ ಒಬ್ಬರನ್ನೊಬ್ಬರು ಅಗಲಿರಲಾಗದಂತಹ ಅಗಾಧವಾದ ಬಿಡಿಸಲಾಗದ ಬಾಂಧವ್ಯ ಅವರಲ್ಲಿತ್ತು.

ಕ್ರಮೇಣ ಮಗನು ಬೆಳೆದು ದೊಡ್ಡವನಾಗಿ ಯುವಕನಾದನು. ಹೀಗಿರುವಾಗ ಆತ ಓರ್ವಳನ್ನು ಪ್ರೀತಿಸತೊಡಗಿದನು. ಆಕೆಯ ಜೊತೆಗಿನ ಅನುರಾಗ ದಿನೇ ದಿನೇ ವರ್ದಿಸತೊಡಗಿತು. ಈರ್ವರೂ ಒಬ್ಬರನ್ನೊಬ್ಬರು ಅಗಲಲಾರದಷ್ಟು ಪ್ರೇಮಿಗಳಾದರು. ಆತನ ಈ ದೌರ್ಬಲ್ಯವನ್ನು ಮನಗಂಡ ಆಕೆ ತಾನು ಏನು ಹೇಳಿದರೂ ಆತ ನಿರ್ವಹಿಸು ವನೆಂಬುದನ್ನು ಅರಿತಳು. ಅದಕ್ಕಾಗಿ ಆಕೆ ತನ್ನನ್ನು ವಿವಾಹವಾಗಬೇಕಾದರೆ ಅಸಾಮಾನ್ಯ ವಾದ ಕೆಲವು ನಿಬಂಧನೆಗಳನ್ನು ಹೇಳಿ ಅದನ್ನು ಪೂರೈಸಬೇಕೆಂಬ ಶರತ್ತು ಒಡ್ಡಿದಳು. ತನ್ನೊಡನೆ ಇರುವ ಪ್ರೀತಿ ಪ್ರಾಮಾಣಿಕ ಎಂದು ಸ್ಪಷ್ಟಪಡಿಸಲು ನಿನ್ನ ತಾಯಿಯ ಹೃದಯವನ್ನು ನನ್ನ ಮುಂದೆ ತಂದು ಇಡಬೇಕೆಂಬ ಶರತ್ತು ವಿಧಿಸಿದಳು. ಇದರಿಂದ ಆ ಯುವಕ ಅಸಹಾಯಕನಾದ. ತನ್ನ ಪ್ರೇಯಸಿಯನ್ನು ತೊರೆಯುವಂತಿಲ್ಲ, ಆಕೆಯ ಬೇಡಿಕೆಯನ್ನು ಪೂರೈಸುವಂತಿಲ್ಲ. ಹೀಗೆ ಅಸಹಾಯಾಕನಾದ ಆತ ನಿರಾಶೆಯಿಂದ ನಿದ್ದೆಗೆಡತೊಡಗಿದ. ಆಹಾರದಿಂದಲೂ ದೂರವಾದನು. ಆತನ

ಮುಖದಲ್ಲಿರುವ ನಿರಾಶೆ ಕಳವಳವನ್ನು ಮನಗಂಡ ಆತನ ತಾಯಿ, "ಮಗನೇ ಏನಾಗಿದೆ ನಿನಗೆ? ಯಾಕೆ ಕೆಲವು ದಿನಗಳಿಂದ ಒಂದು ಥರಾ ಇದ್ದೀ? ನಿನಗಿರುವ ಸಮಸ್ಯೆ ಏನು ಯಾಕಿಷ್ಟು ಕಳವಳಗೊಂಡಿದ್ದೀ?" ಎಂದು ಕೇಳಿದಳು.

ಮೊದ ಮೊದಲು ಹೇಳಲು ನಿರಾಕರಿಸಿದರೂ ಕೊನೆಗೆ ಒತ್ತಾಯ ಪಡಿಸಿದಾಗ ಘಟನೆಯನ್ನು ವಿವರಿಸಿದನು. ಎಲ್ಲವನ್ನೂ ಆಲಿಸಿದ ಕರುಣಾಮಯಿಯಾದ ಆ ಮಾತೆ: ಅದಕ್ಕೇನು ಈಗ? ಮಗನೇ ನಾನು ಇಲ್ಲಿ ಅಂಗಾತ ಮಲಗುತ್ತೇನೆ. ನೀನು ನನ್ನ ಎದೆಯನ್ನು ಸಿಗಿದು ಹೃದಯವನ್ನು ತೆಗೆದುಕೊಂಡು ಹೋಗಿ ಆಕೆಯ ಮುಂದೆ ಇಟ್ಟು ಬಿಡು. ಆಕೆಯನ್ನು ವಿವಾಹವಾಗಿ ಸಂತೋಷದಿಂದ ಬಾಳು. ನನ್ನ ಸಂತೃಪ್ತಿಯು ನಿನ್ನ ಸುಖ ಸಂತೋಷದಲ್ಲಿದೆ ಅಲ್ಲವೇ! ಎಂದು ಹೇಳಿದಳು.

ಹಾಗೆಯೇ ಆತ ತಾಯಿಯ ಎದೆಯನ್ನು ಸೀಳಿ ಅದರಿಂದ ಹೃದಯವನ್ನು ತೆಗೆದು ತನ್ನ ಪ್ರೇಮಿಯ ಬಳಿಗೆ ಕೊಂಡು ಹೋಗಲು ಓಡುತ್ತಿರುವಾಗ ದಾರಿ ಮಧ್ಯೆ ಆತ ಎಡವಿ ಬಿದ್ದು ಬಿಟ್ಟನು. ಆಗ ನೊಂದುಕೊಂಡ ಆ ಮಾತೆಯ ಹೃದಯವು ಆತನೊಂದಿಗೆ: ಮಗನೇ ನಿನಗೇನಾದರೂ ಗಾಯವಾಯಿತೇ? ಸರಿ ಏಳು. ಸಾವಧಾನ ದಿಂದ ಏಳು. ಕಾಲಿಗೆ ಏನಾದರೂ ಗಾಯವಾಯಿತೇ? ನೋವಾಯಿತೇ? ಪರವಾಗಿಲ್ಲ ನಿಧಾನವಾಗಿ ಗಮನವಿಟ್ಟು ಹೋಗು ಎಂದಿತು... ಇದು ಮಾತೆಯ ಹೃದಯ. ಮಕ್ಕಳ ಯಾವ ತಪ್ಪುಗಳನ್ನೂ ಕ್ಷಮಿಸಿ ಮನ್ನಿಸುವ ತೀರವಿಲ್ಲದ ಕಾರುಣ್ಯದ ಕಡಲು. ಆಕೆ ಮಕ್ಕಳ ಎಂಥಹಾ ತಪ್ಪುಗಳನ್ನೂ ಕ್ಷಮಿಸುವ ಕರುಣಾಮಯಿ.

## ಕಮಲಾ ಸುರಯ್ಯಾ

ಕಮಲಾ ಸುರಯ್ಯಾರವರು ಮಲಯಾಳದಲ್ಲಿ ಬರೆದಂತಹಾ 'ನೈ ಪಾಯಸ' ಎಂಬ ಪ್ರಸಿದ್ಧ ಕತೆಯೊಂದಿದೆ. ತಾಯಿ ಬೆಳಗ್ಗೆ ಬೇಗ ಎದ್ದು ಆಹಾರವನ್ನು ತಯಾರಿಸುತ್ತಾಳೆ. ಮಕ್ಕಳನ್ನು ಬೇಗ ಎಬ್ಬಿಸಿ, ಸ್ನಾನ ಮಾಡಿಸಿ, ಅವರಿಗೆ ಶುಭ್ರ ಬಟ್ಟೆಯನ್ನು ತೊಡಿಸಿ, ಶಾಲೆಗೆ ಕಳಿಸುತ್ತಾಳೆ. ಅವರಿಗೆ ಬೇಕಾದ ಮಧ್ಯಾಹ್ನದ ಭೋಜನವನ್ನೂ ಕೊಟ್ಟು ಕಳುಹಿಸುತ್ತಾಳೆ. ಪತಿಗೆ ಬೇಕಾದ ಆಹಾರವನ್ನೂ ನೀಡುತ್ತಾಳೆ. ಆತನ ಇತರೆಲ್ಲ ಅಗತ್ಯಗಳನ್ನೂ ಪೂರೈಸುತ್ತಾಳೆ. ನಂತರ ಮನೆಕೆಲಸದಲ್ಲಿ ತೊಡಗಿಸಿಕೊಳ್ಳುತ್ತಾಳೆ.

ಕೆಲಸಕ್ಕೆಂದು ಹೋದ ಪತಿ ಕಚೇರಿಯಿಂದ ಸಂಜೆ ಮನೆಗೆ ಮರಳಿ ಬರುವಾಗ ಆಕೆಯು ಅಡಿಗೆ ಕೋಣೆಯಲ್ಲಿ ಪೊರಕೆಯ ಬಳಿ ಬಿದ್ದು ಬಿಟ್ಟಿರುವುದು ಕಂಡು

ಬರುತ್ತದೆ. ಕರೆದರೂ ಆಕೆಗೆ ಎಚ್ಚರವಾಗುತ್ತಿಲ್ಲ. ಆಕೆಯನ್ನು ಆತ ಆಸ್ಪತ್ರೆಗೆ ಸಾಗಿಸುತ್ತಾನೆ. ವೈದ್ಯರು ತಪಾಸಣೆ ಮಾಡಿದಾಗ ಹೃದಯಾಘಾತದಿಂದ ಮರಣ ಹೊಂದಿ ಒಂದೂವರೆ ಗಂಟೆ ಕಳೆಯಿತು ಎಂದು ತಿಳಿದು ಬರುತ್ತದೆ. ಆಸ್ಪತ್ರೆಯ ಅಗತ್ಯ ಕೆಲಸಗಳನ್ನೆಲ್ಲಾ ಮುಗಿಸಿ ಮನೆಗೆ ಮರಳಿದಾಗ ಮಕ್ಕಳೆಲ್ಲರೂ ಹಸಿವಿನಿಂದ ಸುಸ್ತಾಗಿ ಕಾಯುತ್ತಿದ್ದರು. ಅಡುಗೆ ಏನಾದರೂ ಮಾಡೋಣವೆಂದು ಪಾತ್ರೆ ತೆರೆದು ನೋಡಿದಾಗ ಅಲ್ಲಿ ಒಂದು ಪಾತ್ರೆಯಲ್ಲಿ ಚಪಾತಿ, ಇನ್ನೊಂದು ಪಾತ್ರೆಯಲ್ಲಿ ಅನ್ನ, ಮತ್ತೊಂದು ಪಾತ್ರೆಯಲ್ಲಿ ಸಾಂಬಾರು ಎಲ್ಲವನ್ನೂ ತಯಾರಿಸಿ ಇಡಲಾಗಿತ್ತು. ಕೊನೆಗೊಂದು ಗಾಜಿನ ಪಾತ್ರೆ ತೆರೆದು ನೋಡುವಾಗ ಮಕ್ಕಳಿಗೆ ಆಗಾಗ ಮಾಡಿಕೊಡುತ್ತಿದ್ದ ತುಪ್ಪದ ಪಾಯಸ ಅದರಲ್ಲಿಡಲಾಗಿತ್ತು.

ಮಕ್ಕಳು ಆಹಾರವನ್ನು ಸೇವಿಸಿ ಹಸಿವು ನೀಗಿಸಿಕೊಂಡರು. ಪಾಯಸವನ್ನೂ ಕುಡಿದರು. ಇನ್ನು ಅನ್ನ ಬೇಡವೇ ಮಗು ಎಂದು ತಂದೆ ಕೇಳಿದರು. ಬೇಡ ಅಪ್ಪಾ ಪಾಯಸ ಸಾಕು. ಅದು ಬಹಳಷ್ಟು ರುಚಿಯಿದೆ! ಎಂದರು.

ಇನ್ನೊಂದು ಮಗು ನಗುತ್ತಾ ಅಮ್ಮ ರುಚಿ ರುಚಿಯಾದ ಪಾಯಸ ಮಾಡಿದ್ದಾರೆ ಎಂದು ಹೇಳಿತು.

ತಾಯಿಯ ಹೃದಯ ಹೀಗಿರುತ್ತದೆ. ಪತಿ, ಮಕ್ಕಳಿಗಾಗಿ ಜೀವಿಸುವ ಮಧ್ಯೆ ಪ್ರಾಣ ತೊರೆದವಳು. ಎಂದೆಂದಿಗೂ ಅವರ ಬಗ್ಗೆ ಮಾತ್ರ ಚಿಂತಿಸುವವಳು. ಆ ಬಗ್ಗೆ ಜೀವಿಸಲೂ ಸಾಯಲೂ ಮರೆಯುವವಳು. ತನ್ನ ಬದುಕಿನ ಭಾರದ ಕುರಿತು ದೂರು ನೀಡದವಳು. ರೋಗದ ಬಗ್ಗೆ ಕೂಡಾ ಆಲೋಚಿಸಲು ಸಮಯವಿಲ್ಲದವಳು!!

ಮಾಧವಿ ಕುಟ್ಟಿಯವರು ಬರೆದಂತಹ ಇನ್ನೊಂದು ಕತೆಯಲ್ಲಿಯೂ ಗೃಹಿಣಿಯ ಬದುಕಿನ ಸ್ಪಷ್ಟ ಚಿತ್ರಣವಿದೆ. ಮುಂಜಾನೆಯಿಂದ ಮಧ್ಯರಾತ್ರಿಯ ವರೆಗೆ ತನ್ನ ಕುಟುಂಬವನ್ನು ಸಲಹುತ್ತಾಳೆ. ದಣಿದು ದೇಹ ಕ್ಷೀಣಿಸಿದರೂ ಆ ಕುರಿತು ಯಾವತ್ತೂ ದೂರು ನೀಡದವಳು. ಯಾವಾಗಲೂ ತೀವ್ರ ಪರಿಶ್ರಮದಿಂದ ಇರುತ್ತಾಳೆ. ಆದರೂ ಪತಿ ಮತ್ತು ಮಕ್ಕಳು ಆಕೆಯ ನೆರವಿಗೆ ಬರುತ್ತಿಲ್ಲ.

ಒಂದು ದಿನ ಕಿರಿಯ ಪುತ್ರ ಶಾಲೆಯಿಂದ ಮರಳಿ ಬಂದು ಮೊದಲ ಬಾರಿಗೆ ನೆಲ್ಲಿಕಾಯಿ ತಂದು ಕೊಟ್ಟಾಗ ಅದನ್ನು ಅಡುಗೆ ಕೋಣೆಯಲ್ಲಿ ನಿಂತು ತಿನ್ನುವಾಗ ಸಂತೋಷದಿಂದ ಆಕೆಯ ಕಣ್ಣಿಂದ ಆನಂದ ಭಾಷ್ಪ ಉದುರುತ್ತದೆ. ಸ್ವಲ್ಪ ಸಮಯ ಕಳೆದಿದ್ದಷ್ಟೇ ಮಗನ ಕೋಪಕ್ಕೆ ಆಕೆ ಗುರಿಯಾದಳು. ಶಾಲೆಯಲ್ಲಿ ನಾಟಕ ನೋಡಲು

ಆಸಕ್ತಿಯನ್ನು ಆಕೆ ಪ್ರಕಟಿಸಿದಾಗ, ಆತ: ಬೇಡಮ್ಮಾ, ನೀನು ಬರಬೇಡ. ನನ್ನ ಗೆಳೆಯರ ಮುಂದೆ ನೀನು ಬರುವುದು ನನಗೆ ಇಷ್ಟವಿಲ್ಲ ಎಂದನು.

ಆಕೆ: ಮದುವೆಗೆ ತಂದ ಹೊಸ ಸೀರೆಯನ್ನುಟ್ಟು ಬರುತ್ತೇನೆ ಕಣೋ ಎಂದಾಗಲೂ ಆತನದ್ದು ಒಂದೇ ಉತ್ತರ: ಅಮ್ಮಾ ನೀನು ಬರಬೇಡಮ್ಮಾ.

ಮನೆ ಕೆಲಸ ನಿರ್ವಹಿಸಿ ಆಕೆಗೆ ಜ್ವರ, ಹೊಟ್ಟೆ ನೋವು ಬಾಧಿಸಿತು. ಶುಂಠಿ ನೀರು, ಕರಿಮೆಣಸಿನ ರಸವನ್ನು ಹೀರಿ ಹತ್ತು ದಿವಸಗಳು ಕಳೆದರೂ ರೋಗವು ಉಲ್ಬಣವಾಗುತ್ತಲೇ ಇತ್ತು. ಕೊನೆಗೆ ವೈದ್ಯರ ಸಲಹೆಯಂತೆ ಆಸ್ಪತ್ರೆಗೆ ದಾಖಲಿಸಲಾಯಿತು. ಆಸ್ಪತ್ರೆಯಲ್ಲಿಯೂ ಕಣ್ಣು ತೆರೆದು: ಅಲ್ಲಿ ಬೇಳೆಯ ಸಾಂಬಾರು ಇದೆ ಅಂತ ಕಾಣುತ್ತೆ ಎಂದು ಹೇಳಿದಳು. ಆಕೆಯ ಪತಿಯ ಕಣ್ಣುಗಳಿಂದ ಹನಿಯು ತೊಟ್ಟಿಕ್ಕತೊಡಗಿತು.

ಹೆಚ್ಚಿನ ತಾಯಂದಿರ ಬದುಕು ಇದೇ ರೀತಿ ಇದೆ. ಪತಿ ಮಕ್ಕಳಿಗಾಗಿ ತನ್ನ ಬದುಕನ್ನೇ ಕರಗಿಸುತ್ತಾರೆ. ಅಪರೂಪಕ್ಕೆ ಕೆಲವರನ್ನು ಹೊರತುಪಡಿಸಿದರೆ ಎಲ್ಲಾ ತಾಯಂದಿರೂ ತಮಗಿಂತ ಹೆಚ್ಚಾಗಿ ತಮ್ಮ ಮಕ್ಕಳನ್ನು ಪ್ರೀತಿಸುತ್ತಾರೆ. ತಮಗಿಂತ ಹೆಚ್ಚಿನ ಪ್ರಾಮುಖ್ಯತೆ ಯನ್ನು ಅವರಿಗೆ ನೀಡುತ್ತಾರೆ. ತಮ್ಮ ಬದುಕನ್ನು ತಮ್ಮ ಸಂತಾನಗಳಿಗಾಗಿ ವ್ಯಯಿಸದವರು ತೀರಾ ವಿರಳ. ಮಗು ಭಾವಿಗೆ ಬಿದ್ದರೆ ಈಜಲು ಬರುತ್ತದೆಯೇ ಎಂದು ಕೂಡಾ ಯೋಚಿಸದೆ ಅವಳು ಬಾವಿಗೆ ಹಾರುತ್ತಾಳೆ. ಮಗುವನ್ನು ಮಲಗಿಸಿದ ತೊಟ್ಟಿಲಿನಲ್ಲಿ ವಿಷಯುಕ್ತ ಹಾವು ಹೆಡೆಯೆತ್ತಿ ನಿಂತಿದ್ದರೂ ಅದನ್ನು ಲೆಕ್ಕಿಸದೆ ಓಡಿ ಹೋಗಿ ಮಗುವನ್ನು ಎತ್ತಿಕೊಳ್ಳುತ್ತಾಳೆ.

ವಿಶ್ವ ಪ್ರಸಿದ್ದ ಬರಹಗಾರ 'ವಿಕ್ಟರ್ ಯೂಗೋ' ಬಡವರ ತಾಯಿಯೋರ್ವರನ್ನು ಪರಿಚಯಿಸುತ್ತಾರೆ. ಫನ್ತೀನ್ ಎಂಬಾಕೆಯು ತನ್ನ ಕೋಸಿ ಎಂಬ ಮಗಳನ್ನು ಸಾಕಲು ಹತ್ತು ಫ್ರಾಂಕ್‌ಗೆ ತನ್ನ ತಲೆಗೂದಲನ್ನು ಮಾರುತ್ತಾಳೆ. ಅದು ಸಾಲದೇ ಇದ್ದಾಗ ನಲುವತ್ತು ಫ್ರಾಂಕ್‌ಗೆ ತನ್ನ ಹಲ್ಲುಗಳನ್ನೂ ಮಾರುತ್ತಾಳೆ.

ತನ್ನನ್ನೇ ಅಡವಿಟ್ಟು ಮಕ್ಕಳನ್ನು ಬೆಳೆಸಲೂ ಮಾತೆಯರು ಹಿಂಜರಿಯುವುದಿಲ್ಲ. ಮಕ್ಕಳು ಹಸಿವಿನಿಂದ ಬಳಲಬಾರದೆಂದು ಅವಳು ಹಸಿವು ಸಹಿಸುತ್ತಾಳೆ. ಅವರ ದಾಹ ತಣಿಸಲು ಸ್ವತಃ ದಾಹವನ್ನು ಮರೆಯುತ್ತಾಳೆ. ಮಕ್ಕಳ ನಿದ್ದೆಗಾಗಿ ತಾನು ನಿದ್ದೆಗಳೆಯು ತ್ತಾಳೆ. ತಮ್ಮ ಮಕ್ಕಳ ಸುಖ ನೆಮ್ಮದಿಗಾಗಿ ಆಕೆ ಎಲ್ಲ ಸುಖವನ್ನೂ ತ್ಯಜಿಸುತ್ತಾಳೆ. ಬೆನ್ನು ಬಾಗುವವರೆಗೆ ದುಡಿಯುತ್ತಾಳೆ. ದಣಿದು ಕುಸಿದು ಬೀಳುವ ತನಕ ನಡೆಯುತ್ತಾಳೆ.

## ವೈಕಮ್ ಮುಹಮ್ಮದ್ ಬಶೀರ್‌ರವರ ತಾಯಿ

ಖ್ಯಾತ ಮಲಯಾಳಂ ಸಾಹಿತಿ ವೈಕಮ್ ಮುಹಮ್ಮದ್ ಬಶೀರ್‌ರವರ ತಾಯಿ ಪ್ರೀತಿ ವಾತ್ಸಲ್ಯದ ಮಾದರಿ ಮಹಿಳೆಯಾಗಿದ್ದಾರೆ. ಊರನ್ನು ತೊರೆದು ಹೋದ ಮುಹಮ್ಮದ್ ಬಶೀರ್, ಒಂಬತ್ತು ವರ್ಷಗಳ ಬಳಿಕ ಮನೆಗೆ ಮರಳುತ್ತಾರೆ. ಹೀಗೆ ಬರುವಾಗ ತಾಯಿ ನಮಾಝ್‌ನ ಮುಸಲ್ಲದಲ್ಲಿ ಪ್ರಾರ್ಥನಾ ನಿರತರಾಗಿದ್ದರು. ಪರಸ್ಪರ ಕುಶಲಾನ್ವೇಶಣೆ ಮುಗಿದ ಬಳಿಕ: ನೋಡು ಮಗಾ ಅಲ್ಲಿ ಆ ಬೆಳಕಿನ ಸಮೀಪದಲ್ಲಿರುವ ಪಾತ್ರೆಯಲ್ಲಿ ನಿನಗೆ ಊಟ ಬಡಿಸಿಟ್ಟಿದ್ದೇನೆ. ಹೋಗು ಊಟ ಮಾಡು ಎಂದರು.

ಇದನ್ನು ಕೇಳಿದ ಬಶೀರ್‌ರವರು: ಅಮ್ಮಾ! ನಾನು ಈಗ ಬರುತ್ತೇನೆ ಎಂದು ನಿನಗೆ ಯಾರು ಹೇಳಿದರು ಎಂದು ಕೇಳಿದರು.

ಇದಕ್ಕೆ ಅವರ ತಾಯಿ ನೀಡಿದ ಉತ್ತರವಿದೆಯಲ್ಲಾ ಅದು ಎಂಥಹವರನ್ನೂ ವಿಸ್ಮಯಗೊಳಿಸಬಹುದು. ಅವರು: ಮಗನೇ! ನೀನು ಬರುವೆನೆಂಬ ನಿರೀಕ್ಷೆಯಿಂದ ಪ್ರತಿ ದಿನವೂ ನಾನು ನಿನಗೆ ಊಟವನ್ನು ಬಡಿಸಿಡುತ್ತಿದ್ದೆ. ಮುಂಜಾನೆ ನೀನು ಬಂದಿಲ್ಲ ವೆಂದು ಖಾತ್ರಿಯಾದಾಗ ನಿರಾಶೆಯಿಂದ ನಾನೇ ಅದನ್ನು ಸೇವಿಸುತ್ತಿದ್ದೆ. ಅದು ನನಗೆ ಆ ದಿನದ ಆಹಾರವಾಗಿರುತ್ತದೆ. ಊರು ತೊರೆದು ಮಗನಿಗಾಗಿ ಒಂಬತ್ತು ವರ್ಷಗಳ ಕಾಲ ಆಹಾರವಿಟ್ಟು ಕಾಯುತ್ತಿದ್ದ ಆ ಮಾತೆಯನ್ನು ಮರೆಯಲು ಹೇಗೆ ಸಾಧ್ಯ!

ಇದು ತಾಯಿ ಎಂಬ ಅಸ್ತಿತ್ವದ ತಾತ್ಪರ್ಯವಾಗಿದೆ. ಒಂದು ಪೆನ್ನಿಗೂ ವಿವರಿಸಲಾಗದ ಮಹಾ ವಿಸ್ಮಯ! ಒಂದು ನಾಲಗೆಗೂ ವಿವರಿಸಲಾಗದ ಸಹನಾಮಯಿ. ಕವಿಗಳ, ಕತೆಗಾರರ, ವಾಗ್ಮಿಗಳ ವಿವರಣೆಗೂ ಮೀರಿದ ಸಹನೆಯ ಸಾಕಾರಮೂರ್ತಿ. ಎಲ್ಲಾ ಚಿಂತನೆಗಳನ್ನೂ ಎಲ್ಲಾ ಕಲ್ಪನೆಗಳನ್ನೂ ಎಲ್ಲಾ ಲೆಕ್ಕಾಚಾರವನ್ನೂ ಮೀರಿಸುವ ಕಲಾಸೃಷ್ಟಿ. ಹೀಗಿದ್ದರೂ ಸಹೃದಯಿ ಸಾಹಿತಿಗಳು ಮಾತೆಯ ಮಹತ್ವವನ್ನು ತಮಗೆ ಸಾಧ್ಯವಾದಷ್ಟರ ಮಟ್ಟಿಗೆ ಪ್ರಸ್ತುತಪಡಿಸಲು ಶ್ರಮಿಸಿದ್ದಾರೆ.

## ಕವನಗಳಲ್ಲಿ ಅಮ್ಮ

ಮಾತೆಯ ನೋವು ಮನೋವೇದನೆಯ ಕುರಿತು ಕವಿ ರಫೀಕ್ ಅಹ್ಮದ್‌ರ ಕವನವೊಂದು ಹೀಗಿದೆ.

ಭೂಮಿ ಆಕಾಶಗಳು ನಿದ್ರಿಸುತ್ತಿರುವಾಗ
ನಿದ್ದೆಗಳೆದ ಕಣ್ಣುಗಳೊಂದಿಗೆ

ನಿದ್ದೆಯ ಮಂಪರಿಗೆ ಇಳಿದು
ಹೊರಳಾಡಿ ಉರುಳಾಡಿ
ನಿದ್ದೆಯಲ್ಲಿರುವಾಗ ಬಳಿಯಲ್ಲಿ ಕೂತವಳು
ನನ್ನ ಅಳುವಿಗೆ ಬೆಚ್ಚಿ ಬಿದ್ದು ಎಚ್ಚರವಾದವಳು
ಎದೆಹಾಲುಣಿಸಿ ಸಾಂತ್ವನಿಸಿದವಳು

ಅವಧಿ ಮೀರಿ ಹತ್ತು ತಿಂಗಳು
ಗರ್ಭ ಧರಿಸಿ ನನ್ನ ಸಲಹಿದವಳು
ಒಂದೆಡೆ ಒರಗಿ ಮಲಗಲಾಗದೆ
ನಿಶೆಯನ್ನು ನಿದ್ರಾವಾಹಿನಿಯನ್ನಾಗಿಸಿದವಳು
ಹಗಲಲ್ಲಿ ಮೆಲ್ಲ ಮೆಲ್ಲನೆ ನಡೆದವಳು

ನನ್ನ ಜನ್ಮಕ್ಕಾಗಿ
ನೀನು ಸಹಿಸಿದ ನೋವುಗಳು
ನೀನು ಸಹಿಸಿದ ತ್ಯಾಗಗಳು
ಬದಲು ನಾನೇನು ನೀಡಲಿ
ಪ್ರಾರ್ಥನೆಯ ಹೊರತಾಗಿ....

ನಮ್ಮ ಆಯಸ್ಸು ಪೂರ್ತಿಯಾಗಿ ವ್ಯಯಿಸಿದರೂ ಆಕೆ ಗರ್ಭ ಧರಿಸಿದ್ದಕ್ಕಾಗಿ, ಆ ಯಾತನೆ ಅನುಭವಿಸಿ ಸಾಕಿ ಸಲಹಿದ್ದಕ್ಕೆ ಪ್ರತಿಯಾಗಿ ಏನನ್ನೂ ನೀಡಲು ಸಾಧ್ಯವಿಲ್ಲ.

ಒಮ್ಮೆ ಓರ್ವರು ಮಧ್ಯಾಹ್ನದ ಸುಡುಬಿಸಿಲಲ್ಲಿ ತನ್ನ ವಯೋವೃದ್ಧೆಯಾದ ಮಾತೆಯನ್ನು ಹೆಗಲ ಮೇಲೆ ಕುಳ್ಳಿರಿಸಿ ಕಅಬಾ ತವಾಫ್ ಮಾಡಿದರು. ನಾನು ಮಹತ್ತರವಾದ ಒಂದು ಕರ್ಮ ಮಾಡಿದೆನೆಂದು ಅಭಿಮಾನದಿಂದ ಅವರು ಪ್ರವಾದಿಯವರ(ಸ) ಬಳಿಗೆ ಹೋಗಿ ಕೇಳಿದರು: ಪ್ರವಾದಿಗಳೇ, ನಾನು ನನ್ನ ಮಾತೆಯೊಂದಿಗಿರುವ ಹಕ್ಕನ್ನು ಈ ಕರ್ಮದ ಮುಖಾಂತರ ಪೂರೈಸಿದೆನೇ ಎಂದು ಕೇಳಿದರು.

ಆಗ ಪ್ರವಾದಿವರ್ಯರು(ಸ): ಇಲ್ಲ ಎಂದಿಗೂ ಇಲ್ಲ, ನೀನು ಸ್ವಲ್ಪ ಚಿಂತಿಸಿ ನೋಡು. ನೀನು ನಿನ್ನ ಮಾತೆಯನ್ನು ಕೆಲವೇ ನಿಮಿಷಗಳಷ್ಟು ಹೊತ್ತು ನಡೆದೆ. ಆದರೆ ನಿನ್ನ ಮಾತೆ ಯಾವುದೇ ರೀತಿಯ ಆಲಸ್ಯ ತೋರದೆ ವೈಮನಸ್ಸು ಕಾಣಿಸದೆ ಗರ್ಭಾಶಯದಲ್ಲಿ ನಿನ್ನನ್ನು ಹತ್ತು ತಿಂಗಳು ಹೊತ್ತು ನಡೆದಳು. ಗರ್ಭಿಣಿಯಾಗಿರುವಾಗ

ಎಷ್ಟೋ ಯಾತನೆ ನೋವು ಅನುಭವಿಸಿರಬಹುದು! ಅದಕ್ಕೆ ಬದಲು ನೀಡಲು ಯಾರಿಗಾದರೂ ಸಾಧ್ಯವಿದೆಯೇ ಎಂದು ಹೇಳಿದರು.

ತಾಯಿಯಾದವಳಿಗೆ ಯಾವತ್ತೂ ಮಕ್ಕಳ ಸುರಕ್ಷತೆಯ ಬಗ್ಗೆಯೇ ಕಾಳಜಿ. ಆ ಬಗ್ಗೆಯೇ ಅವಳು ಯಾವಾಗಲೂ ಚಿಂತಿಸುತ್ತಿರುತ್ತಾಳೆ. ಆಕೆಯ ಕಣ್ಣು, ಕಿವಿಯೆಲ್ಲವೂ ಅವರ ಜೊತೆಯಿರುವುದು. ಅವರು ಸಾವಿರಾರು ಕಿಮೀ ದೂರ ಇದ್ದರೂ ಆಕೆಯ ಹೃದಯ ಸದಾ ಅವರ ಬಳಿ ಇರುವುದು. ಆಕೆಯ ಚಿಂತೆ ಬಯಕೆ ಎಲ್ಲವೂ ಅವರೊಂದಿಗೆ ಜೋಡಿಸಿರುವುದು. ಅವರಿಗೇನಾದರೂ ಅವಘಡವಾದರೆ..ಎಂಬ ಕಳವಳ! ಅವರಿಗೇನೂ ಅಪಾಯ ಆಗದಿರಲಿ ಎಂಬ ಪ್ರಾರ್ಥನೆ ಸದಾ ಇರುವುದು.

ಒಮ್ಮೆ ಗಾಂಧೀಜಿಯವರು ತಮ್ಮ ತಾಯಿಯ ತ್ಯಾಗದ ಕುರಿತು ಪುತ್ರ ಹರಿಲಾಲ್ ಜೊತೆ ವಿವರಿಸಿದ್ದರು. ಗಾಂಧೀಜಿಯವರು ರೈಲಿನಲ್ಲಿ ಪ್ರಯಾಣಿಸುತ್ತಿದ್ದರು. ಜೊತೆಯಲ್ಲಿ ಕಸ್ತೂರಿ ಬಾಯಿ ಹಾಗೂ ಪುತ್ರ ಹರಿಲಾಲ್ ಕೂಡಾ ಇದ್ದರು. ಗಾಂಧೀಜಿಯವರ ಆಗಮನದ ವಿಷಯ ತಿಳಿದು ಜನ ಸೇರಿದರು. ಅವರೆಲ್ಲರೂ ಗಾಂಧೀಜಿ ಕಿ ಜೈ ಎಂಬ ಘೋಷಣೆ ಕೂಗತೊಡಗಿದರು. ಓರ್ವರು ಮಾತ್ರ ಕಸ್ತೂರಿ ಬಾಯಿ ಕೀ ಜೈ ಎಂದು ಕೂಗುತ್ತಿದ್ದರು. ಅದು ಪುತ್ರ ಹರಿಲಾಲ್ ಆಗಿದ್ದರು. ಅವರು ತನ್ನ ಬಳಿಯಿದ್ದ ದಾಳಿಂಬೆ ಹಣ್ಣನ್ನು ತುಂಡರಿಸಿ ತಾಯಿಗೆ ನೀಡಿದರು. ಬಳಿಕ: ಅಮ್ಮ ಇದನ್ನು ತಿನ್ನಬೇಕು. ಅದನ್ನು ನನಗೆ ನೋಡಬೇಕು ಎಂದು ಹೇಳಿದರು.

ಇದನ್ನು ನೋಡಿದ ಗಾಂಧೀಜಿಯವರು 'ನನಗೆ ಇಲ್ಲವೇ' ಎಂದು ಕೇಳಿದರು.

'ಬಾಪೂಜಿ ನೀವು ದೊಡ್ಡ ನಾಯಕರಾಗಿದ್ದೀರಿ. ಎಲ್ಲಿ ಹೋದರೂ ಜನರು ಸೇರಿ ನಿಮ್ಮನ್ನು ಗೌರವಿಸುತ್ತಾರೆ. ಅವರು ನಿಮಗೆ ಜಯ ಘೋಷಣೆ ಮೊಳಗಿಸುತ್ತಾರೆ. ತಮಗೆ ಏನನ್ನೂ ನೀಡಲು ಸಿದ್ಧರಿರುತ್ತಾರೆ. ಆದರೆ ತಾವು ಬೆಳೆದು ಬೆಳೆದು ಉನ್ನತಿಯ ಒಂದೊಂದೇ ಮೆಟ್ಟಿಲೇರಿದ್ದೀರಿ. ಅದರ ಹಿಂದೆ ಈ ಬಡ ತಾಯಿಯ ತ್ಯಾಗ ಪರಿಶ್ರಮ ಇದೆ ಎನ್ನುವುದನ್ನು ಮರೆಯಬಾರದು' ಎಂದು ಗದ್ಗದಿತರಾಗಿ ನುಡಿದರು.

'ಅಮ್ಮ' ಎಂಬುದು ಒ.ಎನ್.ವಿ. ಕುರುಪ್ಪು ಎಂಬ ಪ್ರಸಿದ್ಧ ಕವಿಯ ಕವನವಾಗಿದೆ. ಓರ್ವ ತಾಯಿಯು ಹೆತ್ತ ಒಂಬತ್ತು ಮಕ್ಕಳಿದ್ದರು. ಗಾರೆ ಕೆಲಸಗಾರರಾಗಿದ್ದ ಅವರೆಲ್ಲರೂ ಜೊತೆಯಾಗಿ ವಾಸವಾಗಿದ್ದರು. ಒಂದಾಗಿ ಆಹಾರ ಸೇವಿಸುತ್ತಿದ್ದರು. ಕಲ್ಲುಗಳನ್ನು ಕೆತ್ತಿ ಗೋಡೆ ಕಟ್ಟುವುದು ಅವರ ಕೆಲಸವಾಗಿತ್ತು. ಒಮ್ಮೆ ಅವರು ಒಂದು ಕೋಟೆಯ ಹಿಂಬಾಗದಲ್ಲಿ ಗೋಡೆ ಕಟ್ಟುತ್ತಿದ್ದರು. ಎಷ್ಟೇ ಕೆತ್ತನೆ ಮಾಡಿ ಕಟ್ಟಿದರೂ ಗೋಡೆ

ಸರಿಯಾಗುತ್ತಿರಲಿಲ್ಲ. ಕಲ್ಲುಗಳನ್ನು ಬದಲಿಸಿ ನೋಡಿದರು. ಆದರೂ ಸರಿಯಾಗುತ್ತಿರಲಿಲ್ಲ. ಕೊನೆಗೆ ಅವರು ಪರಿಹಾರವೊಂದನ್ನು ಕಂಡು ಹಿಡಿದರು. ಒಂಬತ್ತು ಮಂದಿಯಲ್ಲಿ ಓರ್ವನ ಹೆಂಡತಿಯನ್ನು ಗೋಡೆಗೆ ಸೇರಿಸಿ ಕಟ್ಟಬೇಕೆಂಬುದು ಅವರ ನಿರ್ಧಾರವಾಗಿತ್ತು. ಅಲ್ಲಿಗೆ ಮೊದಲು ಬರುವ ಮಹಿಳೆಯನ್ನು ಗೋಡೆಗೆ ಸೇರಿಸಿ ಕಟ್ಟಲು ನಿರ್ಧರಿಸಿದರು. ಅಲ್ಲಿಗೆ ಊಟದೊಂದಿಗೆ ಹಿರಿಯ ಪುತ್ರನ ಹೆಂಡತಿ ಆಗಮಿಸಿದಳು. ಅವಳೊಂದಿಗೆ ನಡೆದ ವಿಚಾರವೆಲ್ಲಾ ತಿಳಿಸಿದಾಗ ಅವಳು ಎಲ್ಲರ ಪ್ರಾಣ ಉಳಿಸಲು ತಾನು ಸಿದ್ಧಳೆಂದು ತಿಳಿಸಿದಳು. ನನ್ನ ಕೊನೆಯ ಉಸಿರು ನಿಲ್ಲುವ ತನಕ ನನ್ನ ಮಗುವಿಗೆ ಹಾಲುಣಿಸುವ ಸೌಕರ್ಯ ಮಾಡಿಕೊಟ್ಟರೆ ಸಾಕು ಎಂದು ವಿನಂತಿಸಿದಳು.

ಓರ್ವ ತಾಯಿ ಮತ್ತು ಮಗುವಿನ ಜೊತೆಯಿರುವ ಆತ್ಮಬಂಧವನ್ನು ಈ ಕತೆ ವಿವರಿಸುತ್ತದೆ. ಎಲ್ಲಾ ತಾಯಂದಿರ ಸ್ವಭಾವವು ಹೀಗೆಯೇ. ತಾಯಿ ಮತ್ತು ಮಕ್ಕಳ ನಡುವಿನ ಸಂಬಂಧ ಮುರಿದು ಬೇರ್ಪಡಿಸಲು ಯಾರಿಂದಲೂ ಸಾಧ್ಯವಿಲ್ಲ.

ತಾಯಿಯ ಕರುಣೆ ತ್ಯಾಗವನ್ನು ವಿವರಿಸುವಂತಹ ಒಂದು ಘಟನೆಯನ್ನು ಆಯಿಶಾ(ರ) ಹೀಗೆ ವಿವರಿಸುತ್ತಾರೆ: ನನ್ನ ಬಳಿ ಓರ್ವ ಮಹಿಳೆ ಬಂದರು. ಅವರ ಜೊತೆ ಇಬ್ಬರು ಹೆಣ್ಮಕ್ಕಳಿದ್ದರು. ಆಕೆ ಬಂದು ನನ್ನೊಡನೆ ಏನಾದರೂ ನೀಡಿ ಎಂದು ಕೇಳಿದಳು. ನನ್ನ ಜೊತೆ ಆಗ ಒಂದು ಖರ್ಜೂರ ಮಾತ್ರವಿತ್ತು. ನಾನು ಅದನ್ನು ಆಕೆಗೆ ನೀಡಿದೆ. ಅವಳು ಅದನ್ನು ಎರಡು ಬಾಗ ಮಾಡಿ ಈರ್ವರಿಗೆ ಹಂಚಿದಳು. ಅವಳು ಏನನ್ನೂ ತಿನ್ನಲಿಲ್ಲ. ನಂತರ ಎದ್ದು ಆಕೆ ಅಲ್ಲಿಂದ ತೆರಳಿದಳು. ಆಗ ನಾನು ಈ ವಿಚಾರವನ್ನು ಪ್ರವಾದಿವರ್ಯರ(ಸ) ಬಳಿ ಪ್ರಸ್ತಾಪಿಸಿದೆ. ಆಗ ಅವರು(ಸ) ಹೇಳಿದರು, 'ಯಾರಾದರೂ ತನ್ನ ಹೆಣ್ಮಕ್ಕಳಿಂದ ಪರೀಕ್ಷೆಗೊಳಪಡುತ್ತಾಳೆ ಮತ್ತು ಆಕೆ ಒಳಿತು ಮಾಡುತ್ತಾಳೆ ಎಂದಾದರೆ ಆಕೆಗೆ ಅದು ನರಕದ ತಡೆಯಾಗಿ ಪರಿಣಮಿಸುವುದು.' (ಮುಸ್ಲಿಮ್)

## ನನ್ನಮ್ಮ

ನನಗೆ ನೆನಪಿರುವಂತೆ ನನ್ನ ತಾಯಿ ಯಾವಾಗಲೂ ಕಠಿಣ ಪರಿಶ್ರಮಿ. ಮುಂಜಾನೆ ನಾಲ್ಕು ಗಂಟೆಗೆ ಏಳುವಳು. ಸೂರ್ಯೋದಯವಾಗುವಾಗ ಮನೆಕೆಲಸವೆಲ್ಲ ಪೂರ್ತಿಗೊಳಿಸುವಳು. ಬಿಸಿಲು ಹೊರಬಂದೊಡನೆ ಹೊರಗಿಳಿಯುವಳು. ಮನೆಯ ಸಮೀಪದ ಜಮೀನಿನಲ್ಲಿ ಕೆಲಸ ಮಾಡುವಳು. ದಣಿದು ಬಳಲಿದಾಗ ಬಾವಿಯಿಂದ ನೀರು ಸೇದಿ ದಾಹ ತಣಿಸುವಳು. ಮತ್ತೆ ಕೆಲಸದಲ್ಲಿ ನಿರತಳಾಗುವಳು.

ರಾತ್ರಿ ನಿದ್ದೆಗೆಟ್ಟು ತೀವ್ರ ಪರಿಶ್ರಮದಿಂದ ಕೆಲಸ ಕಾರ್ಯ ಮಾಡಿದ ದಿನಗಳೂ

ಅಮ್ಮನ ಬದುಕಿನಲ್ಲಿತ್ತು. ಹಗಲಿನಲ್ಲಿ ಬಯಲಿನಲ್ಲಿ ಕೆಲಸ ಮಾಡಿ ರಾತ್ರಿ ಬಹಳ ಇಕ್ಕಟ್ಟಾದ ಕೋಣೆಯಲ್ಲಿ ಉರಿಯುವ ಬೆಂಕಿಯ ಒಲೆಯ ಮುಂದೆ ನಿಂತು ಆಹಾರ ತಯಾರಿಸುತ್ತಿ ದ್ದರು. ಆಹಾರವನ್ನು ಬೆಳಗಾದ ಕೂಡಲೇ ತಂದೆಯವರು ಮನೆಮನೆಗೆ ತೆರಳಿ ಮಾರಾಟ ಮಾಡುತ್ತಿದ್ದರು. ಅದರಲ್ಲಿ ಸಿಗುವ ಚಿಲ್ಲರೆ ಹಣದಿಂದ ಅಕ್ಕಿ, ಸಕ್ಕರೆ ಚಾಹುಡಿ ಮತ್ತಿತರ ಸಾಮಾನುಗಳನ್ನು ತರುತ್ತಿದ್ದರು.

ಅಕ್ಕಿಯಿಂದ ಅಮ್ಮ ಗಂಜಿಮಾಡುತ್ತಿದ್ದರು. ಅಪ್ಪನಿಗೆ ಬಡಿಸಿ ನಂತರ ನಮಗೆ ಬಡಿಸುತ್ತಿದ್ದರು. ನಂತರ ಅಮ್ಮ ಹೇಗೆ ಬದುಕಿದರು? ಹಸಿವು ಇಂಗಿಸಿದರು? ಅದು ಮಾತ್ರ ರಹಸ್ಯವಾಗಿದೆ. ಸಕ್ಕರೆ ಮತ್ತು ಹಾಲು ಹಾಕದ ಚಹಾ ಸೇವಿಸಿ ಅಮ್ಮ ಎಷ್ಟೋ ರಾತ್ರಿ ಕಳೆದಿದ್ದಾರೆಂಬುದು ಲೆಕ್ಕಕ್ಕೆ ಸಿಗದು.

ಹಾಗೆ ಹಸಿವು ದಾಹವನ್ನು ಸಹಿಸಿ ಕಠಿಣ ಪರಿಶ್ರಮದಿಂದ ಅಮ್ಮ ಬದುಕು ಸಾಗಿಸಿದರು. ಆಗಲೂ ಅಮ್ಮನ ಯೋಚನೆ ಚಿಂತೆ, ಆತಂಕ ಎಲ್ಲವೂ ಮಕ್ಕಳ ಕುರಿತಾಗಿತ್ತು. ನಿರಂತರ ಮೂರು ದಿವಸಗಳ ಕಾಲ ಪರಿಶ್ರಮ ನಡೆಸಿಯೂ ಒಂದು ರೂಪಾಯಿ ಕೂಡಾ ಸಾಲ ಸಿಗದೇ ಇದ್ದಾಗ ತಂದೆಯವರು ನಮ್ಮನ್ನೆಲ್ಲಾ ಅಪ್ಪಿ ಹಿಡಿದು ಅತ್ತಿದ್ದ ಘಟನೆಯನ್ನು ಅಮ್ಮ ಕಣ್ಣೀರಿನೊಂದಿಗೆ ಹೇಳಿದ್ದು ಮನದಲ್ಲಿ ಈಗಲೂ ಅಚ್ಚಳಿಯದೆ ನಿಂತಿದೆ. ಅದು ಸಹಜವಲ್ಲವೇ?

ಹಿರಿಯ ಸಹೋದರ ನೌಕರಿಗೆ ಸೇರಿ ಹಸಿವಿನ ದಿನಗಳು ದೂರವಾಯಿತು. ಆಗ ಅಮ್ಮ ರೋಗ ಪೀಡಿತಳಾದಳು. ಹಾಗೇ ಅಮ್ಮನಿಗೆ ಬದುಕಿನ ಸುಖ ಆಸ್ವಾದಿಸಲು ಅವಕಾಶವೇ ಸಿಗಲಿಲ್ಲ. ಇಲ್ಲಿ ಸಿಗದೇ ಇದ್ದದ್ದೆಲ್ಲವೂ ಸಿಗುವ ಇನ್ನೊಂದು ಲೋಕದಲ್ಲಿ ಒಂದಾಗಿದ್ದುಕೊಂಡು ಎಲ್ಲವನ್ನೂ ಅನುಭವಿಸುವ ಅವಕಾಶವನ್ನು ಅಲ್ಲಾಹನು ನೀಡಲಿ ಎಂಬುದೇ ಪ್ರಾರ್ಥನೆ.

ರೋಗ ಪೀಡಿತಳಾಗಿ ನೋವಿನಿಂದ ನರಳುತ್ತಿರುವಾಗಲೂ ಅಮ್ಮ ತನ್ನ ಮಕ್ಕಳ ಕುರಿತೇ ಆತಂಕ ಪಡುತ್ತಿದ್ದರು. ಅಧ್ಯಯನ ಮುಗಿಸಿ ಉದ್ಯೋಗಕ್ಕೆ ಸೇರಿದಾಗ ಜೀವನವು ನಿಬಿಡತೆಯಿಂದ ಕೂಡಿತು. ಮನೆಯಲ್ಲಿ ತಂದೆ ತಾಯಿಯ ಜೊತೆ ಕಳೆಯಲು ಸಮಯ ಸಿಗಲಿಲ್ಲ, ಆ ಕಾರಣದಿಂದ ಹಲವು ಬಾರಿ ಮನೆಗೆ ತಡವಾಗಿ ಆಗಮಿಸುತ್ತಿದ್ದೆ. ದೂರದ ಊರಲ್ಲಿ ನಡೆದ ಕಾರ್ಯಕ್ರಮದಲ್ಲಿ ಭಾಗವಹಿಸಿ ತಡರಾತ್ರಿ ಮನೆಗೆ ಬರುವಾಗ ಅಮ್ಮ ನನ್ನ ಕಾಲ ಸಪ್ಪಳ ಕೇಳಿ ಬೆತ್ತವನ್ನು ಊರಿ ಮೆಲ್ಲ ಮೆಲ್ಲನೆ ಬಂದು ಬಾಗಿಲು ತೆರೆಯುತ್ತಿದ್ದರು. ಒಳಗೆ ಪ್ರವೇಶಿಸಿದಂತೆ ಅಮ್ಮನ ಪ್ರಶ್ನೆ ಹೀಗಿತ್ತು: ಮಗನೇ ತುಂಬಾ

ದಣಿದಿದ್ದಿಯಾ? ಏನಾದರೂ ಹೊಟ್ಟೆಗೆ ತಿಂದಿದ್ದಿಯಾ? ಹೇಗೆ ಬಂದೆ? ವಾಹನ ಸಿಕ್ಕಿತೇ? ಹೀಗೇ ದಿನವೂ ನಿದ್ದೆಗೆಟ್ಟರೆ ಆರೋಗ್ಯ ಕೆಡುವುದಲ್ಲವೇ?

ಆಹಾರ ಸೇವಿಸಿದೆ ಎಂಬ ಉತ್ತರದ ಸಹಿತ ಎಲ್ಲಾ ಪ್ರಶ್ನೆಗಳಿಗೂ ಉತ್ತರ ನೀಡಿದ ಬಳಿಕ ಪುಟ್ಟ ಮಕ್ಕಳೊಂದಿಗೆ ಹೇಳಿದಂತೆ ಇನ್ನು ಬೇಗ ಹೋಗಿ ಮಲಗು ಎಂಬ ವಾತ್ಸಲ್ಯಭರಿತ ಉಪದೇಶ.

ಅಮ್ಮ ಅಗಲಿ ದಶಕಗಳು ಕಳೆದರೂ ಆ ಉಪದೇಶ ಕೇಳಲು ಮನಸ್ಸು, ಕಿವಿಗಳು ಇನ್ನೂ ಹಾತೊರೆಯುತ್ತಿದೆ.

## ಅಪ್ಪ ಎಂಬ ಬಾಗಿದ ಬೆನ್ನಿನ ಬದುಕು

ನಮ್ಮ ಅಮ್ಮಂದಿರು ಮನೆಯೊಳಗಡೆ ತಮ್ಮ ಮಕ್ಕಳಿಗಾಗಿ ಕಠಿಣ ಪರಿಶ್ರಮ ಪಟ್ಟು ಸಕಲ ಕಷ್ಟ ನಷ್ಟಗಳನ್ನು ಸಹಿಸಿದರೆ ಅಪ್ಪಂದಿರು ಮನೆಯ ಹೊರಗಡೆ ಹೋಗಿ ಎಲ್ಲವನ್ನು ಸಹಿಸಿ ಮಕ್ಕಳಿಗಾಗಿ ತಮ್ಮ ಬದುಕನ್ನು ಸವೆಸುತ್ತಾರೆ.

ಎಲ್ಲರೂ ಯಾಕಾಗಿ ತಮ್ಮ ಮೂಳೆ ಸವೆಯುವಂತೆ ಕಷ್ಟಪಡುತ್ತಾರೆ? ರಾತ್ರಿ ಹಗಲೆನ್ನದೆ ಶ್ರಮಿಸುತ್ತಾರೆ? ಇವೆಲ್ಲವೂ ತಮ್ಮ ಅಗತ್ಯಗಳಿಗಲ್ಲ ಎಂಬುದು ದಿಟ.

ಆಹಾರ, ಬಟ್ಟೆ ಬರೆ ಮತ್ತು ವಾಸ ಮಾತ್ರ ಪೂರ್ಣಗೊಳಿಸಲು ಎಂತಹವರಿಗೂ ಇಂದು ಮಾಡುತ್ತಿರುವಂತಹ ಕೆಲಸ ಕಾರ್ಯದ ಸ್ವಲ್ಪಂಶ ಸಾಕು. ಅದಕ್ಕಾಗಿ ಅವರು ಕಷ್ಟ ಪಡುವ ಹತ್ತರಲ್ಲಿ ಒಂದಂಶ ಸಾಕಲ್ಲವೇ? ಆದರೆ ಎಲ್ಲರೂ ರಾತ್ರಿ ಹಗಲೆನ್ನದೆ ದುಡಿದು ಕಷ್ಟ ಪಡುತ್ತಿರುವುದು ತಮ್ಮ ಮಕ್ಕಳಿಗಾಗಿ ಎಂಬುದು ಮಾತ್ರ ಸತ್ಯ.

ಹೆಚ್ಚಿನವರು ಮುಂಜಾನೆ ಮನೆಯಿಂದ ಹೊರಡುತ್ತಾರೆ. ಮತ್ತೆ ರಾತ್ರಿ ಮನೆಗೆ ತಲುಪುತ್ತಾರೆ. ಕೆಲವರು ರಾತ್ರಿ ಹಗಲೆನ್ನದೆ ದುಡಿಯುತ್ತಾರೆ. ಬಿಸಿಲು, ಮಳೆ, ಚಳಿ, ಸೆಖೆ ಎನ್ನದೆ ಕಷ್ಟ ಪಟ್ಟು ದುಡಿಯುತ್ತಾರೆ. ವಾರ್ಧಕ್ಯ ಬಾಧಿಸಿ ಕೆಲಸ ಮಾಡಲಾಗದ ಸ್ಥಿತಿಯವರೆಗೂ ಅದು ತಲುಪುತ್ತದೆ. ಬಡವರೂ ಶ್ರೀಮಂತರೂ ಒಂದೇ ರೀತಿ ಕಷ್ಟಪಟ್ಟು ದುಡಿಯುತ್ತಾರೆ. ಆದರೆ ಕೆಲಸದಲ್ಲಿ ವ್ಯತ್ಯಾಸವಿರುತ್ತದೆ ಅಷ್ಟೇ. ಯಾಕಾಗಿ ಇಷ್ಟು ಕಷ್ಟ ಪಡುತ್ತೀರಿ ಎಂದು ಕೇಳಿದರೆ ಅವರು ಕೂಡಾ ಮಕ್ಕಳಿಗಾಗಿ ಎಂದೇ ಉತ್ತರಿಸುತ್ತಾರೆ. ಕೆಲವರು ಅವರ ಅಗತ್ಯಗಳಿಗೆಂದಾದರೆ ಇನ್ನು ಕೆಲವರು ಅವರಿಗಾಗಿ ಸಂಪಾದಿಸಿ ಶೇಖರಿಸುತ್ತಾರೆ.

ಲಕ್ಷಾಂತರ ಜನರು ಹೊರದೇಶಗಳಲ್ಲಿ ಸುಡುಬಿಸಿಲಿನಲ್ಲಿ ಮತ್ತು ಕೊರೆಯುವ

ಚಳಿಯಲ್ಲಿ ಕಠಿಣವಾಗಿ ದುಡಿದು ಬಳಿಕ ರೋಗಿಗಳಾಗಿ ಮರಳುತ್ತಾರೆ. ಯಾಕೆಂದರೆ ಅವರಲ್ಲಿ ಹೆಚ್ಚಿನವರು ಸಮಯಕ್ಕೆ ಸರಿಯಾಗಿ ಆಹಾರ ಸೇವಿಸುವುದಿಲ್ಲ. ಸರಿಯಾಗಿ ನಿದ್ದೆ ಮಾಡುವುದಿಲ್ಲ. ಮಕ್ಕಳು ರುಚಿಕರವಾದ ಆಹಾರ ಸೇವಿಸಲಿ ಎಂದು ಸರಿಯಾಗಿ ಆಹಾರ ಸೇವಿಸದೆ ಸರಿಯಾಗಿ ನಿದ್ದೆಯೂ ಮಾಡುವುದಿಲ್ಲ. ಮಕ್ಕಳು ಸರಿಯಾಗಿ ಉಂಡು ಸುಖವಾಗಿ ನಿದ್ರಿಸಲಿ ಎಂದು ಟೆಂಟುಗಳಲ್ಲಿ, ಸಣ್ಣ ಇಕ್ಕಟ್ಟಾದ ಕೋಣೆಗಳಲ್ಲಿ ನಿದ್ದೆಗೆಟ್ಟೋ ಅಥವಾ ಅರ್ಧಂಬರ್ಧ ನಿದ್ದೆ ಮಾಡಿಯೋ ದಿನ ದೂಡುತ್ತಾರೆ. ಗಲ್ಫ್ ರಾಷ್ಟ್ರಗಳಲ್ಲಿ ದುಡಿಯುವವರಿಗೆ ಮತ್ತು ಅವರನ್ನು ನೋಡಿದವರಿಗೆ ಮನುಷ್ಯನು ತಮ್ಮ ಮಕ್ಕಳಿಗಾಗಿ ಎಷ್ಟು ಕಷ್ಟ ಪಡುತ್ತಿದ್ದಾನೆ ತನ್ನ ಮಕ್ಕಳ ಪಾಲನೆ ಪೋಷಣೆಗಾಗಿ ಹೇಗೆಲ್ಲಾ ಪರಿಶ್ರಮಪಡುತ್ತಿದ್ದಾನೆಂಬುದು ತಿಳಿಯುತ್ತದೆ.

ಎಲ್ಲಾ ತಂದೆಯಂದಿರೂ ತಮ್ಮ ಮಕ್ಕಳು ಭವಿಷ್ಯದಲ್ಲಿ ತಮ್ಮಂತೆ ಕಷ್ಟಕ್ಕೆ ಗುರಿಯಾಗದಿರಲಿ ಎಂದೇ ಭಾವಿಸುತ್ತಾರೆ. ಅದಕ್ಕಾಗಿ ತಾವು ತಿಂದಿರುವುದಕ್ಕಿಂತ ಉತ್ತಮ ಆಹಾರವನ್ನು ತಮ್ಮ ಮಕ್ಕಳಿಗೆ ನೀಡಲು ಶ್ರಮಿಸುತ್ತಾರೆ. ತಮಗಿಂತ ಹೆಚ್ಚಿನ ಶಿಕ್ಷಣವನ್ನೂ ಅವರಿಗೆ ನೀಡುತ್ತಾರೆ. ಅದಕ್ಕಾಗಿ ಅವರು ಎಂತಹಾ ತ್ಯಾಗಕ್ಕೂ ಸಿದ್ಧರಾಗುತ್ತಾರೆ. ತಾವು ಧರಿಸುವುದಕ್ಕಿಂತ ಉತ್ತಮ ವಸ್ತ್ರಗಳನ್ನು ಅವರಿಗೆ ತೊಡಿಸಲು ಹಿಂದೆ ಸರಿಯುವವರು ಯಾರು ಹೇಳಿ? ತಾವು ವಾಸಿಸಿದ್ದಕ್ಕಿಂತ ಉತ್ತಮ ಮನೆಯನ್ನೂ ನಿರ್ಮಿಸಿ ಕೊಡುತ್ತಾರೆ. ಹೀಗೇ ಎಲ್ಲಾ ಅರ್ಥದಲ್ಲಿಯೂ ತಂದೆಯಂದಿರು ತಮಗಿಂತಲೂ ತಮ್ಮ ಮಕ್ಕಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡುತ್ತಾರೆ. ಮಕ್ಕಳಿಗಾಗಿಯೇ ಬದುಕಲು ಬಯಸುತ್ತಾರೆ. ಮಕ್ಕಳಿಗಾಗಿ ತ್ಯಜಿಸಲು ಎಂತಹಾ ಸಂಕಷ್ಟವನ್ನು ಸಹಿಸಲು ಸಿದ್ಧರಿರುತ್ತಾರೆ. ಮಾನವ ಸಮೂಹದ ಬೆಳವಣಿಗೆ, ಅಭಿವೃದ್ಧಿ, ಎಲ್ಲವೂ ಹೀಗೆ ಪರಿಶ್ರಮಿಸಿದ ಫಲವಾಗಿದೆ.

ಮಕ್ಕಳ ಎಲ್ಲಾ ಅಗತ್ಯಗಳನ್ನು ಪೂರೈಸಲು ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸಲು ತಂದೆಯಾದವನು ಎಂತಹಾ ಉತ್ಸಾಹ ತೋರುತ್ತಾನೆ ಎಂಬುದನ್ನು ಸ್ಪಷ್ಟಪಡಿಸುವಂತಹ ಕತೆಯೊಂದಿದೆ.

ಅಮೇರಿಕಾದಲ್ಲಿ ಕೆಲಸ ಮಾಡುತ್ತಿರುವ ಮಗನು ಹಲವು ವರ್ಷಗಳ ಬಳಿಕ ಮನೆಗೆ ಬಂದನು. ಹೂ ನಗೆ ಬೀರಿ ಕುಳಿತಿದ್ದ ತಂದೆಯ ಜೊತೆ ಒಂದೆರಡು ಮಾತುಗಳನ್ನಾಡಿ ಕೋಣೆಯೊಳಗೆ ಹೋಗಿ ಕುರ್ಚಿಯಲ್ಲಿ ಕುಳಿತುಕೊಂಡು ಲ್ಯಾಪ್‌ಟಾಪ್ ತೆರೆದು ಅದರಲ್ಲಿ ನಿರತನಾಗುತ್ತಾನೆ.

ಒಳಗೆ ಬಂದ ತಂದೆಯು ಮಗನೊಂದಿಗೆ: ಮಗನೇ, ಎಷ್ಟು ದಿನ ನೀನು

ಇಲ್ಲಿರುವೆ? ಯಾವಾಗ ಮರಳಿ ಹೋಗುವೆ? ಎಂದು ಕೇಳಿದರು. ಮಗನು ಸ್ವಲ್ಪ ಆಲಸ್ಯದಿಂದ ಮುಖವೂ ನೋಡದೆ, 'ಸ್ವಲ್ಪ ದಿನ ಕಳೆದು' ಎಂದು ಹೇಳಿದನು.

ತಂದೆ ಇದೇ ಪ್ರಶ್ನೆಯನ್ನು ಪುನರಾವರ್ತಿಸಿದನು. ಆತ ಪುನಃ ಅದನ್ನೇ ಸ್ವಲ್ಪ ಗಟ್ಟಿಯಾಗಿಯೇ ಉತ್ತರಿಸಿದನು. ಸ್ವಲ್ಪ ಸಮಯ ಕಳೆದ ನಂತರ ಮತ್ತೆ ತಂದೆ ಈ ಪ್ರಶ್ನೆ ಪುನರಾವರ್ತಿಸಿದರು. ಈ ಬಾರಿ ಸ್ವಲ್ಪ ಕೋಪದಿಂದ ಗಡುಸಾಗಿ: ಎಷ್ಟು ಬಾರಿ ಹೇಳುವುದು. ಈ ತಂದೆಗೆ ಬೇರೆ ಕೆಲಸವಿಲ್ಲವೇ? ಎಂದು ಉತ್ತರಿಸಿದನು.

ತಂದೆ ತಲೆ ತಗ್ಗಿಸಿಕೊಂಡು ಕೋಣೆಯಿಂದ ಹೊರ ಬಂದರು. ಟೇಬಲ್‌ನ ಡ್ರಾವರ್ ಓಪನ್ ಮಾಡಿ ಅದರಿಂದ ಒಂದು ಹಳೆಯ ಡೈರಿಯನ್ನು ತಗೆದರು. ಅದರಿಂದ ಒಂದು ಪುಟವನ್ನು ತೆರೆದು ಮಗನ ಮುಂದೆ ಇರಿಸಿದರು. ಅದರಲ್ಲಿ ಮಗನು ಸಣ್ಣ ಮಗುವಾಗಿದ್ದಾಗ ಕಡಲ ತೀರಕ್ಕೆ ತಂದೆ ಆತನ ಕೈ ಹಿಡಿದು ಕರೆದು ಕೊಂಡು ಹೋದ ಘಟನೆಯನ್ನು ದಾಖಲಿಸಲಾಗಿತ್ತು.

ಅಲ್ಲಿ ಒಂದು ದನದ ಬೆನ್ನ ಮೇಲೆ ಒಂದು ಕಾಗೆಯು ಕುಳಿತಿತ್ತು. ಮಗನು ಅದನ್ನು ನೋಡಿ ಅದೇನೆಂದು ಕೇಳಿದನು. ತಂದೆ ಅದು ಕಾಗೆ ಎಂದುತ್ತರಿಸಿದ್ದನು. ಈ ಪ್ರಶ್ನೆಯನ್ನು ಆತ ಮೂವತ್ತು ಬಾರಿ ಕೇಳುತ್ತಲೇ ಇದ್ದನು. ಆಗೆಲ್ಲಾ ತಂದೆ ನಸು ನಗುತ್ತಲೇ ಅದು ಕಾಗೆ ಎಂದುತ್ತರಿಸಿದ್ದರು.

ತಂದೆಯ ಡೈರಿ ಓದಿದಾಗ ಮಗನಿಗೆ ತನ್ನ ತಪ್ಪಿನ ಅರಿವಾಯಿತು. ನನ್ನನ್ನು ಸಾಕಿ ಸಲಹಿ ಶಿಕ್ಷಣ ನೀಡಿ, ನಾನು ಇಂದು ಈ ಸ್ಥಿತಿಯಲ್ಲಿರಲು ನನ್ನ ತಂದೆ ಅದೆಷ್ಟು ಕಷ್ಟ ಪಟ್ಟಿರುತ್ತಾರೆ ಎಂಬುದನ್ನು ಆತ ಸ್ಮರಿಸಿದನು. ನನ್ನನ್ನು ನನ್ನ ತಂದೆ ಅದೆಷ್ಟು ಪ್ರೀತಿಸುತ್ತಿದ್ದರು. ನನ್ನಲ್ಲಿ ಅದೆಷ್ಟು ವಾತ್ಸಲ್ಯ ಹೊಂದಿದ್ದರು ಎಂಬ ಬಾಲ್ಯಕಾಲದ ಘಟನೆಗಳನ್ನೆಲ್ಲಾ ಸ್ಮರಿಸಿ ಪಶ್ಚಾತ್ತಾಪ ಭಾವದಿಂದ ಆ ಯುವಕನ ಮನ ತುಂಬಿ ಬಂತು. ಆತ ತಂದೆಯ ಬಳಿಗೆ ಹೋಗಿ ಕ್ಷಮೆ ಯಾಚಿಸಿದನು.

ಪ್ರಸಿದ್ಧ ತಮಿಳು ಸಾಹಿತಿ ಜಯಮೋಹನ್‌ರವರ 'ಉರವಿಡಂಗಳ್' ಎಂಬ ಕೃತಿಯಿದೆ. ಅವರ ಸ್ಮರಣೆಯ ಸಂಚಾರವದು. ಅದರಲ್ಲಿ ತಂದೆಯ ಕುರಿತು ಹೆಚ್ಚಾಗಿ ಪರಾಮರ್ಶಿಸಲಾಗಿದೆ. ಅವರ ತಂದೆ ಬಾಹುವೇಲ್ ಪಿಳ್ಳೆಯವರದು ತುಂಬಾ ಹಠವಾದಿ, ಕೋಪ, ಅಹಂಕಾರದ ವ್ಯಕ್ತಿತ್ವವಾಗಿತ್ತು. ಬಾಲ್ಯ ಕಾಲದಿಂದ ಯೌವನದ ವರೆಗೆ ಅವರಿಗೆ ತಂದೆಯ ಬಗ್ಗೆ ಮನದಲ್ಲಿ ದುಷ್ಟ ತಂದೆ ಎಂಬ ಭಾವನೆಯೇ ತುಂಬಿತ್ತು. ಕಿಟಕಿಯ ಬದಿಯಲ್ಲಿ ನಿಲ್ಲಿಸಿ ನಾಗರ ಬೆತ್ತದಿಂದ ಬಡಿಯುವ ದೃಶ್ಯ ಅವರ ಸ್ಮರಣೆಯಲ್ಲಿ

ಸದಾ ಇತ್ತು. ಆದರೆ ಯುವಕನಾದ ಬಳಿಕ ಅಮ್ಮ ಅಪ್ಪನ ಕುರಿತು ಹೇಳಿದ್ದು ಕೇಳಿದಾಗ ತಂದೆಯನ್ನು ಸ್ಮರಿಸಿ ಹೃದಯ ಮಿಡಿಯುತ್ತಿತ್ತು. ಮನವು ನೋವಿಂದ ಚಡಪಡಿಸಿತ್ತು. ಸಣ್ಣ ವಾತದ ರೋಗಕ್ಕೆ ಸಿಲುಕಿ ಬಾಲ್ಯದಲ್ಲಿಯೇ ಜಯಮೋಹನ್ ಪ್ರಾಣಹೋಗುವ ಸ್ಥಿತಿಯಲ್ಲಿದ್ದರು. ಅದಕ್ಕೆ ಆ ರೋಗವಾಸಿಯಾಬೇಕಾದರೆ ಆ ಕಿಟಕಿಯ ಬಳಿ ನಿಲ್ಲಿಸಿ ಏಟು ನೀಡಬೇಕಾದ ಅಗತ್ಯವಿತ್ತು. ಅವರು ಅಪ್ಪ ಕೋಪದಿಂದ ಬಡಿಯುವುದನ್ನು ಮಾತ್ರ ಕಂಡಿದ್ದರು. ಆದರೆ ಮಧ್ಯ ರಾತ್ರಿ ಎದ್ದು ಮಗನ ಬಗ್ಗೆ ಯೋಚಿಸಿ ಬಳಿಗೆ ಹೋಗಿ ಅಪ್ಪ ಅಳುವುದನ್ನು ಅಮ್ಮ ಮಾತ್ರ ನೋಡಿದ್ದರು. ಮೀನಿನ ಸಾರು ಇಲ್ಲದೆ ಒಂದು ಹೊತ್ತಿನ ಊಟವನ್ನೂ ಮಾಡದ ಅಪ್ಪನ ವರ್ತನೆ ಒರಟುತನವೆಂದು ದೂರಿದಾಗ ಅಮ್ಮ ಆತನೊಡನೆ, “ನೋಡು ಮಗಾ, ನೀನು ವಾತರೋಗದಿಂದ ಬಳಲಿ ನುಗ್ಗೆ ಸೊಪ್ಪಿನಲ್ಲಿ ಊಟ ಮಾಡುತ್ತಿದ್ದಾಗ ಒಂದು ತುಂಡು ಮೀನು ಕೂಡಾ ತಿನ್ನದೆ ಆ ಮನುಷ್ಯ ಊಟ ಮಾಡುತ್ತಿದ್ದರೆಂಬುದು ನಿನಗೆ ಗೊತ್ತಾ” ಎಂದು ನೆನಪಿಸಿದ್ದರು.

ಪ್ರಾರ್ಥನೆ ಮತ್ತು ಪ್ರೋತ್ಸಾಹದಲ್ಲಿ ನಮ್ಮ ಕನಸುಗಳಿಗೆ ಯಾವಾಗಲೂ ಒಂದರ್ಥ ಕೊಡುವ ತಂದೆಯು ಯಾವುದನ್ನೂ ಬಯಸದೆ ದೂರ ನಿಲ್ಲುವ ಬಡ ವ್ಯಕ್ತಿಯಾಗಿದಾನೆ.

ಹೆಸರಾಂತ ವಿಜ್ಞಾನಿ ರಾಂಡಿ ಪಾಶ್ ಎಂಬವರಿಗೆ ನಲುವತ್ತನೆಯ ವಯಸ್ಸಿನಲ್ಲಿ ಕ್ಯಾನ್ಸರ್ ರೋಗ ಬಾಧಿಸಿತ್ತು. ಅವರು ಕೆಲಸ ಮಾಡುತ್ತಿದ್ದ ಕಚೇರಿಯಲ್ಲಿ ಸಹೋದ್ಯೋಗಿಗಳು ಒಂದು ಕಾರ್ಯಕ್ರಮ ಸಂಘಟಿಸಿದರು. ಆ ಕಾರ್ಯಕ್ರಮದಲ್ಲಿ ಮಾತನಾಡುತ್ತಾ: ನನ್ನ ಮಗಳು ದೊಡ್ಡವಳಾದಾಗ ಆಕೆಗೆ ತನ್ನನ್ನು ಮೊತ್ತ ಮೊದಲು ಪ್ರೀತಿಸಿದ ಪುರುಷ ತನ್ನ ಅಪ್ಪ ಎಂಬ ವಿಚಾರ ಮಾತ್ರ ಆಕೆಗೆ ತಿಳಿದಿರದು ಎಂದು ಹೇಳಿದ್ದ.

ಒಂದು ಕವಿತೆಯಲ್ಲಿ ಹೀಗಿದೆ: ನೀವೊಮ್ಮೆ ಚಿಂತಿಸಿ ನೀವು ನೀವಾಗಿದ್ದು ಹೇಗೆಂದು!

ತಂದೆ ತಾಯಂದಿರು ತಮ್ಮ ಮಕ್ಕಳಿಗಾಗಿ ಹೇಗೆ ಬದುಕಿದ್ದರು ಎಂಬುದಕ್ಕೆ ಯಾವುದೇ ವಿವರಣೆಯ ಅಗತ್ಯವಿಲ್ಲ ಎಂಬುದು ಸ್ಪಷ್ಟ. ಸ್ವತಃ ತಮ್ಮ ಬಾಲ್ಯ ಕಾಲವನ್ನು ಸ್ಮರಿಸಿ ನಮ್ಮ ಸುತ್ತಲೂ ನಡೆಯುವುದನ್ನು ಗಮನಿಸುತ್ತಾ ನೋಡುತ್ತಾ ಇರುವುದನ್ನು ಸ್ಮರಿಸಿದರೆ ಸಾಕು. ಆದರೆ ಯೌವನದ ಬಿಸಿರಕ್ತದ ಮದದಲ್ಲಿ ಗತಕಾಲದತ್ತ ಒಮ್ಮೆ ಹಿಂದಿರುಗಿ ನೋಡಲು ಅಥವಾ ಮುಂದಿನ ಭವಿಷ್ಯದ ಕುರಿತು ಒಮ್ಮೆ ಕಣ್ಣೋಡಿಸಲು ಹೆಚ್ಚಿನವರು ಸಿದ್ಧರಿಲ್ಲ ಎಂಬುದು ಸಮಸ್ಯೆಯಾಗಿದೆ. ಆದ್ದರಿಂದಲೇ ಈ ಕಾಲದಲ್ಲಿ ತಂದೆ ತಾಯಂದಿರು ಹೆಚ್ಚು ನಿರ್ಲಕ್ಷ್ಯಕ್ಕೆ ಒಳಗಾಗುತ್ತಿದ್ದಾರೆ.



# ಎಂತೆಂತಹ ಮಕ್ಕಳು!

ದಶಕಗಳ ಹಿಂದೆ ದಸ್ತಾವೆಸ್ಕಿ ಬರೆದ 'ಸಹೋದರರು' ಎಂಬ ಪ್ರಸಿದ್ಧ ಕೃತಿಯೊಂದನ್ನು ವಾಚಿಸಿದ್ದೆ. ಅದರ ಪ್ರಮುಖ ಪಾತ್ರಧಾರಿ ಇವಾನ್, 'ತಮ್ಮ ತಂದೆ ತಾಯಂದಿರು ಒಮ್ಮೆ ಸಾಯಲಿ ಎಂದು ಬಯಸುವ ಮಕ್ಕಳಿದ್ದಾರೆಯೇ?' ಎಂದು ಲಿಸಾ ಜೊತೆ ಕೇಳುತ್ತಾನೆ. ಆಗ ಅದಕ್ಕೆ ಲಿಸಾ, 'ಎಲ್ಲಾ ಮಕ್ಕಳೂ ಅದನ್ನು ಬಯಸುತ್ತಾರೆ. ಆದರೆ ಯಾರೂ ಬಹಿರಂಗವಾಗಿ ಹೇಳುವುದಿಲ್ಲ' ಎಂದುತ್ತರಿಸುತ್ತಾರೆ.

ಆ ದಿನಗಳಲ್ಲಿ ಅದನ್ನೊಂದು ಅರಾಜಕತೆ ಸೃಷ್ಟಿಸುವವರ ಒಂದು ಕೃತ್ಯವಾಗಿ ಅದನ್ನು ಪರಿಗಣಿಸುತ್ತಿದ್ದರು.

ಬಳಿಕ ಯುಜೀನ್ ಆ್ಯನಿಲ್ ಎಂಬ ಪ್ರಸಿದ್ಧ ನಾಟಕದಲ್ಲಿ ಕ್ಯಾಲಿಫೋರ್ನಿಯಾ ದಿಂದ ನ್ಯೂಯಾರ್ಕ್ ವರೆಗೆ ತನ್ನ ತಾಯಿಯ ಮೃತ ದೇಹವನ್ನು ಕೊಂಡೊಯ್ಯುತ್ತಿದ್ದರು. ಆಗ ಕಂಠಪೂರ್ತಿ ಮದ್ಯ ಸೇವಿಸಿ ಬೀದಿ ವೇಶ್ಯೆಯ ಜೊತೆ ಸಂಚರಿಸಿದ್ದ ಜೆಂಸ್ ಎಂಬ ಪಾತ್ರಧಾರಿಯ ಪರಿಚಯವಾಯಿತು. ಆ ವೇಳೆ ಪಾಶ್ಚಾತ್ಯ ಸಮಾಜವು ಅರಾಜಕತೆಯಿಂದ ತುಂಬಿ ಹೋಗಿತ್ತು.

ಕಮಲಾ ಸುರಯ್ಯಾ ಆಗಿ ಮಾರ್ಪಟ್ಟ ಮಾಧವಿ ಕುಟ್ಟಿಯ 'ಅಮ್ಮ' ಕತೆಯನ್ನು ಓದಿದೆ. ಅದರಲ್ಲಿ ನಿರಾಶ್ರಿತರಾದ ಓರ್ವ ವೃದ್ಧ ಮಾತೆಯ ಅಸಹಾಯಕತೆ ಯನ್ನು ಬಿಂಬಿಸಲಾಗಿತ್ತು. ಅದರ ಮೊದಲ ಭಾಗ ಹೀಗಿತ್ತು:

ಅಂಗಡಿಯಿಂದ ತರಕಾರಿ ಖರೀದಿಸಿ ಬರುತ್ತಿದ್ದ ವೃದ್ಧೆಯನ್ನು ಒಂದು ಕಪ್ಪು ಕಾರು ಡಿಕ್ಕಿ ಹೊಡೆದು ಬೀಳಿಸಿತ್ತು. ಅವರ ಬಲ ಕಾಲಿಗೆ ಏಟಾಯಿತು. ಅವರು ಅಲ್ಲಿಯೇ ಬಿದ್ದು ನೋವಿಂದ ಚಡಪಡಿಸಿದರು. ಆದರೆ ಅಯ್ಯೋ ಎಂದು ಕೂಗಲು ಕೂಡಾ ಆಕೆಯ ನಾಲಗೆ ಶಕ್ತಿ ಕಳೆದುಕೊಂಡಿತ್ತು. ಅಷ್ಟೊಂದು ಯಾತನೆಯನ್ನು ಆ ತಾಯಿ ಅನುಭವಿಸುತ್ತಿದ್ದರು.

ಕಾರು ನಿಲ್ಲಿಸದೆ ಮುಂದೆ ಸಾಗಿತ್ತು. ಆಗ ಒಬ್ಬ ಹಾಲು ಮಾರಾಟಗಾರ, 'ಅಮ್ಮಾ! ನಿಮಗೆ ಏನಾಯಿತು?' ಎಂದು ಕೇಳಿದ.

'ಅಮ್ಮಾ' ಎಂಬ ಆ ಕರೆ ಕೇಳಿ ಅವರು ಸ್ವಲ್ಪ ಶಕ್ತಿ ಪಡೆದವರಂತಾದರು. ಏಕೆಂದರೆ ಅವರು 'ಅಮ್ಮಾ' ಎಂಬ ಕರೆ ಕೇಳಿ ವರ್ಷಗಳೇ ಕಳೆದಿದ್ದವು. ಐದಾರು ವರ್ಷಗಳ ಹಿಂದೆ ಮಕ್ಕಳು ಅಮ್ಮಾ... ಅಮ್ಮಾ... ಎಂದು ಎಷ್ಟೋ ಬಾರಿ ಕರೆದಿದ್ದರು. ಅಂದು ಅವರು ನನ್ನನ್ನು ತೊರೆದು ಹೊರದೇಶಗಳಿಗೆ ಹೋಗಿರಲಿಲ್ಲ. ಆಗ ನನ್ನನ್ನು ತುಂಬಾ ಪ್ರೀತಿಸುತ್ತಿದ್ದರು. ಹಲವು ವರ್ಷಗಳ ಹಿಂದೆ ನನಗೆ ತಲೆ ನೋವಾದಾಗ ಹತ್ತು ವಯಸ್ಸಿನ ಪುತ್ರ ನನ್ನ ತಲೆಯ ಭಾಗದಲ್ಲಿ ಕಣ್ಣೀರು ತುಂಬಿಕೊಂಡು ತನ್ನ ಹಸ್ತವನ್ನು ನನ್ನ ಹಣೆಯ ಮೇಲೆ ಇಟ್ಟು 'ಅಮ್ಮಾ ತಲೆ ನೋಯುತ್ತಿದೆಯೇ?' ಎಂದು ಕೇಳಿದ್ದನ್ನು ಆ ವಯೋವೃದ್ಧೆ ಸ್ಮರಿಸಿದರು, 'ಅಯ್ಯೋ ಅವನು ಅದೆಷ್ಟು ಬೇಗ ಬದಲಾದ. ಅವನನ್ನು ನೋಡದೆ ಅದೆಷ್ಟು ವರ್ಷಗಳಾದವು!'

ಆ ವೃದ್ಧೆಯನ್ನು ರಿಕ್ಷಾ ಚಾಲಕನೋರ್ವ ಆಸ್ಪತ್ರೆಗೆ ದಾಖಲಿಸಿದ. ವೈದ್ಯರು ಪರೀಕ್ಷಿಸಿದರು. ದೇಹದಲ್ಲಾದ ಗಾಯದ ಮೇಲೆ ಔಷಧಿ ಹಚ್ಚಿದರು. ಅದೇ ರಿಕ್ಷಾ ಚಾಲಕ ಆ ತಾಯಿಯನ್ನು ಅವರ ಮನೆಗೆ ತಲುಪಿಸಿದನು.

ಆ ತಾಯಿ ಸಣ್ಣ ಚಾಪೆಯನ್ನು ಕೂಡಾ ಹಾಸದೆ ಬರಿ ನೆಲದಲ್ಲಿ ಮಲಗಿದರು. ವೃದ್ಧೆ ಚಿಂತನಾ ಲಹರಿಯಲ್ಲಿದ್ದರು... 'ನಾನೆಲ್ಲವನ್ನೂ ಅವರಿಗಾಗಿ ಮಾಡಿದೆ. ಎಷ್ಟು ಬಾರಿ ಅವರ ಬಟ್ಟೆಯನ್ನು ಒಗೆದಿದ್ದೆ! ಎಷ್ಟು ನಿದ್ದೆಗೆಟ್ಟು ಅವರ ಶುಶ್ರೂಷೆಗೈದಿದ್ದೆ. ಈಗ ಅವರೆಲ್ಲಾ ಬೆಳೆದು ಅಪ್ಪಂದಿರಾದರು. ಆದ್ದರಿಂದ ನಾನು ಯಾರಿಗೂ ಬೇಡವಾದೆ. ಅದು ಆ ಕಪ್ಪು ಮರ್ಸಿಡಿಸ್ ಕಾರಿಗೆ ತಿಳಿದಿತ್ತು!'

ಅವರ ಮತ್ತೊಂದು ಕತೆಯಾದ 'ಕೀರಿ ಪರಿಂಞ ಚಕಲಾಸ್' ಎಂಬ ಕತೆಯಲ್ಲಿ ಒಂದು ಭಾಗ ಹೀಗಿದೆ: ದೆಹಲಿಯಲ್ಲಿ ಉದ್ಯೋಗದಲ್ಲಿದ್ದ ಮಗನು ಮನೆಯ ಬಳಿ ಕಾರಲ್ಲಿ ಬಂದು ಇಳಿದನು. ಆಗಂತುಕನು ದೆಹಲಿಯಿಂದ ಬಂದವನು ಎಂದು ಹೇಗೋ ಆ ಮಾತೆಗೆ ತಿಳಿಯಿತು. ತನ್ನ ಮಗನಿಗೆ ಅಲ್ಲಿಂದ ಮರಳಲು ಬಿಡುವು ಇರಲಿಕ್ಕಿಲ್ಲ ಎಂಬುದನ್ನು ಸ್ಮರಿಸಿದರು. ಅದಕ್ಕಾಗಿ ಆ ಮಾತೆ ಆತನೊಂದಿಗೆ, 'ನನ್ನ ಮಗ ದೆಹಲಿಯಲ್ಲಿದ್ದಾನೆ. ಅವನೊಂದಿಗೆ ಒಂದು ಹೊಸ ಕಂಬಳಿಯ ಚದ್ದರ ಖರೀದಿಸಿ ಕೊಡಲು ಹೇಳಬೇಕು. ಆತ ಮದ್ರಾಸಿನಲ್ಲಿ ಕಲಿಯುತ್ತಿದ್ದಾಗ ತಂದ ಕಂಬಳಿಯ ಚದ್ದರ ಹರಿದು ಚಿಂದಿಯಾಗಿದೆ. ಅದನ್ನು ಈಗ ನಾನು ಹೊದ್ದುಕೊಳ್ಳುತ್ತಿದ್ದೇನೆ' ಎಂದರು.

ಬಂದಿರುವಾತ ಮಗನೆಂದು ಎಷ್ಟೇ ಹೇಳಿದರೂ ಆ ಮಾತೆಗೆ ಗುರುತು ಹಚ್ಚಲಾಗಲಿಲ್ಲ. ತಾಯಿ ಒಳಗೆ ಹೋದಾಗ ಹಿರಿಯ ಸಹೋದರಿ ಆತನೊಂದಿಗೆ, 'ನೀನು ಯಾಕೆ ಬಂದಿರುವೆ? ಅಮ್ಮನನ್ನು ನೋಡಲು ಮಾತ್ರ ಬಂದಿರುವ ಹಾಗೆ ಕಾಣುತ್ತಿಲ್ಲ?' ಎಂದು ಹೇಳಿದಳು.

ಆಗ ಆತ, 'ಅಯ್ಯೋ ದೆಹಲಿಯಲ್ಲಿ ಬದುಕುವುದು ಬಹಳ ಕಷ್ಟ. ಅಲ್ಲಿ ದಿನ ದೂಡಲು ಭಾರೀ ಖರ್ಚು ವೆಚ್ಚವಿದೆ. ನನ್ನ ಹೆಸರಿನಲ್ಲಿರುವ ಜಾಗವನ್ನು ಮಾರಿ ಹಣ ಪಡೆದು ಹೋಗಲು ಬಂದಿರುವೆ' ಎಂದನು.

'ಅಷ್ಟನ್ನೂ ಮಾಡಿಬಿಟ್ಟೆಯೆಂದರೆ ಮತ್ತೆ ನೀನು ನೋಡಲು ಸಿಗಲಿಕ್ಕಿಲ್ಲ' ಎನ್ನುತ್ತಾ, 'ವಯೋವೃದ್ಧೆಯಾದ ಆ ಅಮ್ಮನನ್ನು ಎಷ್ಟು ವರ್ಷಗಳ ಬಳಿಕ ನೀನು ನೋಡುತ್ತಿರುವೆ ಗೊತ್ತಾ?' ಎಂದು ಆ ಸಹೋದರಿ ಕೇಳಿದಳು.

ಅದಕ್ಕೆ ಆತ, 'ಅಮ್ಮನಿಗೆ ನನ್ನ ನೆನಪೇ ಇಲ್ಲವಲ್ಲಾ!' ಎಂದುತ್ತರಿಸಿ ಕೈತೊಳೆದುಕೊಂಡಿದ್ದ. ಆಗ ಆಕೆ, 'ನಿನಗೆ ಆ ಅಮ್ಮನ ಕುರಿತು ನೆನಪಿದೆಯಾ ಗೋಪಿ?' ಎಂದಳು.

ಇದು ಕೇವಲ ಕತೆಯಲ್ಲ, ನಮ್ಮ  ನಾಡಿನ ನಾನಾ ಭಾಗಗಳಲ್ಲಿ ನಡೆಯುವ ಸಾವಿರಾರು ಘಟನೆಗಳ ಪ್ರತಿರೂಪವಷ್ಟೇ.

## ಸಂಬಂಧ ಕೇವಲ ಕ್ಯಾಮರಾಗಳಿಗೆ ಸೀಮಿತ

ಇ.ಜಿ. ವಸಂತ್‌ರವರು ಬರೆದ 'ವೆಬ್ ಕ್ಯಾಮರಾ' ಎಂಬ ಮಿನಿ ಕತೆ ಹೊಸ ತಲೆಮಾರಿನ ತಂದೆ ತಾಯಂದಿರ ಜೊತೆಗಿನ ಸಂಬಂಧವನ್ನು ಅನಾವರಣಗೊಳಿಸುತ್ತದೆ. ಮಕ್ಕಳೆಲ್ಲರೂ ವಿದೇಶದಲ್ಲಿದ್ದಾರೆ. ತಂದೆಯ ಸಾವಿನ ಬಳಿಕ ತಾಯಿಗೆ ಸಂಗಾತಿಯಾಗಿ ಓರ್ವ ಕೆಲಸದಾಕೆಯನ್ನು ಅವರು ನೇಮಿಸಿದರು. ಪ್ರಾಯಾಧಿಕ್ಯವಾದಂತೆ ಅಮ್ಮನಿಗೆ ಮಕ್ಕಳನ್ನು ಪ್ರತಿದಿನವೂ ನೋಡಬೇಕೆಂದೆನಿಸಿತು. ಅದರಂತೆ ಮಕ್ಕಳು ಕಂಪ್ಯೂಟರ್‌ನಲ್ಲಿ ವೆಬ್ ಕ್ಯಾಮರಾವನ್ನು ಫಿಟ್ ಮಾಡಿದರು. ಕೆಲಸದಾಕೆಗೆ ಈ ಬಗ್ಗೆ ತರಬೇತಿಯನ್ನೂ ನೀಡಿದ್ದರು.  ಪ್ರತಿ ದಿನ ರಾತ್ರಿ ಮಕ್ಕಳನ್ನು ಸೊಸೆಯಂದಿರನ್ನೂ ಮೊಮ್ಮಕ್ಕಳನ್ನೂ ಆಕೆ ಕಣ್ತುಂಬ ನೋಡುವಂತಾಯಿತು.

ಇನ್ನು ಹೆಚ್ಚು ದಿನಗಳ ಕಾಲ ಬದುಕಲಾರರು ಎಂದು ವೈದ್ಯರು ಹೇಳಿದಾಗ ಇನ್ನು ಕೊನೆಯ ಕಾಲದಲ್ಲಿ ಮಕ್ಕಳು ಜೊತೆಯಲ್ಲಿರಬೇಕೆಂದು ಎಲ್ಲಾ ತಾಯಂದಿರಂತೆ ಅವರೂ ಬಯಸಿದರು. ಅವರು ತನ್ನ ಬಯಕೆಯನ್ನು ಮಕ್ಕಳಲ್ಲಿ ತಿಳಿಸಿದರು. ಮಕ್ಕಳು

ಅದನ್ನು ಆಲಿಸಿದರು. ಉತ್ತರ ಮಾತ್ರ ನಮಗೆ ಯಾರಿಗೂ ರಜೆ ಸಿಗುತ್ತಿಲ್ಲ ಎಂದಾಗಿತ್ತು.

ತಾಯಿಯ ಕೊನೆಯ ಕ್ಷಣಗಳನ್ನು ಅವರು ಕ್ಯಾಮರಾದಲ್ಲಿಯೇ ವೀಕ್ಷಿಸಿದರು. ಹತ್ತಿರದಲ್ಲಿರುವಂತೆ ಅಮ್ಮ ಕೂಡಾ ವೀಕ್ಷಿಸಿದರು. ಅವರ ಅಂತಿಮ ಕ್ಷಣದಲ್ಲಿ ಮೇಜಿನ ಮೇಲೆ ಇರಿಸಿದ್ದ ಮಿನರಲ್ ವಾಟರ್ ಬಾಟಲಿ ಕೂಡಾ ಮಿಂಚಿದಂತಾಯಿತು. ಸ್ವಲ್ಪ ಹನಿ ನೀರಿಗಾಗಿ ಆ ಮಾತೆಯ ಬಾಯಿ ಹಪಹಪಿಸಿತು.

## ಮನೆಯೇ ಸೆರೆಮನೆಯಾದಾಗ

ಕೇರಳದಲ್ಲಿ ವೃದ್ಧಾಶ್ರಮಗಳು ಸಾರ್ವತ್ರಿಕವಾಗಿರದಿದ್ದರೂ ಪ್ರತಿ ವರ್ಷ ವೃದ್ಧಾಶ್ರಮ ಗಳ ಸಂಖ್ಯೆ ಹೆಚ್ಚಾಗುತ್ತಲೇ ಇವೆ. ವಾರ್ಧಕ್ಯ ಬಾಧಿಸಿದ ಕೂಡಲೇ ಮನೆಯಿಂದ ಹೊರ ದಬ್ಬಲ್ಪಟ್ಟು ದಾರಿಯಲ್ಲಿ ಅಲೆದಾಡಿ ವೃದ್ಧಾಶ್ರಮಗಳಿಗೆ ತಲುಪುವವರ ಸಂಖ್ಯೆಯೂ ಅಧಿಕವಾಗುತ್ತಿದೆ. ಮಕ್ಕಳೇ ತಮ್ಮ ಹೆತ್ತವರನ್ನು ವೃದ್ಧಾಶ್ರಮಗಳಿಗೆ ಸೇರಿಸುವ ಪ್ರಕ್ರಿಯೆ ಕೂಡ ನಡೆಯುತ್ತಿದೆ. ತಂದೆ ತಾಯಂದಿರನ್ನು ವೃದ್ಧಾಶ್ರಮಗಳಿಗೆ ಸೇರಿಸಿ ಊರು ತೊರೆಯು ವವರೂ ಇದ್ದಾರೆ.

ಹಿಂದಿನ ಕಾಲದಲ್ಲಿ ಮಕ್ಕಳ ಮತ್ತು ಸೊಸೆಯಂದಿರ ಉಪಟಳ ತಾಳಲಾರದೆ ಮನೆ ಯನ್ನು ತೊರೆದ ಮಾತಾಪಿತರ ಸಂಖ್ಯೆ ವಿರಳ. ಆದರೆ ಈಗ ಮಾತಾಪಿತರನ್ನು ಮಕ್ಕಳೇ ಹೊರದಬ್ಬುತ್ತಿದ್ದಾರೆ. ಅವರೇ ಮುತುವರ್ಜಿ ವಹಿಸಿ ವೃದ್ಧಾಶ್ರಮ ಗಳಿಗೆ ಸೇರಿಸುತ್ತಾರೆ. ಸಮಾಜದಲ್ಲಿ ಗೌರವಕ್ಕೆ ಕುಂದು ಬಾರದಿರಲೆಂದು ಮಾತಾ ಪಿತರನ್ನು ಮನೆಯಲ್ಲಿ ಏಕಾಂಗಿಯಾಗಿರಿಸಿ ಬೇರೆ ಊರಿಗೆ ತೆರಳುವವರೇ ಹೆಚ್ಚು.

ಒಮ್ಮೆ ನನಗೆ ಕೇರಳದ ರಾಜಧಾನಿಯಲ್ಲಿ ಹನ್ನೊಂದು ಪ್ರಮುಖ ವ್ಯಕ್ತಿಗಳನ್ನು ಭೇಟಿಯಾಗುವ ಅವಕಾಶ ಕೂಡಿ ಬಂದಿತ್ತು. ಅವರೆಲ್ಲರೂ ರಾಜ್ಯದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ರಂಗದಲ್ಲಿ ಹೆಸರು ಪಡೆದವರಾಗಿದ್ದರು. ಕುಶಲ ವಿಚಾರಿಸಿದ ಬಳಿಕ ನಾನು ಅವರೊಡನೆ, 'ಮನೆಯಲ್ಲಿ ಯಾರಿದ್ದಾರೆ' ಎಂದು ಕೇಳಿದೆ.

ಅದರಲ್ಲಿ ಹತ್ತು ಮಂದಿಯೂ 'ಮನೆಯಲ್ಲಿ ಪತ್ನಿ ಮಾತ್ರ ಇದ್ದಾಳೆ' ಎಂದು ಹೇಳಿ ದ್ದರು. ಹೀಗೆ ಹೇಳಿದವರಲ್ಲಿ ಹೆಚ್ಚಿನವರು ಎಪ್ಪತ್ತು ಎಂಬತ್ತು ವರುಷ ಮೀರಿದವರು.

ಈ ವೃದ್ಧಾಶ್ರಮಗಳಲ್ಲಿ ಜೊತೆಯಾಗಿರಲು ತಮ್ಮ ಸಮಪ್ರಾಯಸ್ಥರು ಇರಬಹುದು. ತಮ್ಮ ನೋವು ನಲಿವುಗಳ ಬಗ್ಗೆ ಹರಟಲು ಅಲ್ಲಿ ಯಾರಾದರೂ ಸಿಗಬಹುದು. ಆದರೆ ಜೀವನ ಸಂಗಾತಿಯ ಹೊರತು ಬೇರೆ ಯಾರೂ ಇಲ್ಲದೆ ದಿನದೂಡುವಂತಹ ವೃದ್ಧ

ದಂಪತಿಗಳ ಬದುಕು ತೀರಾ ವೇದನಾಜನಕ. ವೃದ್ಧಾಶ್ರಮದಲ್ಲಿರುವವರ ಸಂಖ್ಯೆಯು ನಮಗೆ ಸಿಗಬಹುದಾದರೂ ಮನೆಯೇ ಸೆರೆಮನೆಯಾಗಿರುವ ವೃದ್ಧರ ಕುರಿತು ಯಾರಾದರೂ ಲೆಕ್ಕ ಹಾಕಿದ್ದಿದೆಯಾ? ಅದು ಲಕ್ಷವನ್ನೂ ಮೀರಬಹುದು ಎಂಬುದು ನಿಸ್ಸಂಶಯ. ಈ ಹಿಂದೆ ಕೇರಳದಲ್ಲಿ ಜಲಪ್ರಳಯವಾದಾಗ ಹೆಚ್ಚಿನ ಮನೆಯಲ್ಲಿ ವಯೋವೃದ್ಧ ಅಜ್ಜಿ ಅಜ್ಜಂದಿರೇ ಸಿಲುಕಿಕೊಂಡದ್ದನ್ನು ನಾವು ಸ್ಮರಿಸಬಹುದು. ಸಾಮಾನ್ಯವಾಗಿ ಕೇರಳದಲ್ಲಿರುವ ಹೆಚ್ಚಿನ ಮನೆಗಳು ಬಹಳ ವಿಶಾಲವಾದದ್ದಾಗಿರುತ್ತವೆ. ಆ ಮನೆಗಳು ನಾಲ್ಕೈದು ಕೋಣೆಗಳಿಂದ ತುಂಬಿರುವುದು. ಆದರೆ ಅದರಲ್ಲಿ ಹೆಚ್ಚಿನವುಗಳು ಜನರಿಲ್ಲದೆ ಶೂನ್ಯವಾಗಿವೆ. ಮಂಚಗಳು ಕೂಡಾ ಖಾಲಿ ಬಿದ್ದಿರುತ್ತವೆ. ಮನೆಯ ಮುಕ್ಕಾಲು ಬಾಗದಷ್ಟು ಸ್ಥಳ ಜನರೇ ಇಲ್ಲದಂತಹ ಸ್ಥಿತಿಯಾಗಿದೆ.

ಇಂದಿನ ಯುವಜನತೆ ಮದುವೆಯಾಗಿ ಒಂದೆರಡು ಮಕ್ಕಳಾದ ಕೂಡಲೇ ವಾಸ ಬದಲಾಯಿಸುತ್ತಾರೆ. ಕೆಲವರಂತೂ ಮದುವೆಯಾದ ಕೆಲವೇ ತಿಂಗಳಲ್ಲಿ ಬೇರೆ ಮನೆ ಮಾಡುತ್ತಾರೆ. ಹಿಂದೆ ಕಿರಿಯ ಪುತ್ರ ತನ್ನ ಮಕ್ಕಳೊಂದಿಗೆ ತಂದೆ ತಾಯಿಯ ಜೊತೆ ಜೀವಿಸುತ್ತಿದ್ದ. ಈಗ ಸ್ಥಿತಿ ಬದಲಾಗಿದೆ. ಕೊನೆಯ ಮಗನೂ ತನ್ನ ಕುಟುಂಬದೊಂದಿಗೆ ವಾಸವನ್ನು ಬದಲಾಯಿಸುತ್ತಿದ್ದಾನೆ. ಒಂದೋ ವಿದೇಶದಲ್ಲಿ ಅಥವಾ ಊರಲ್ಲಿಯೇ ಬೇರೆ ಮನೆ ಮಾಡಿಕೊಂಡು ಜೀವಿಸುತ್ತಿದ್ದಾನೆ. ಉದ್ಯೋಗದ ಕಾರಣದಿಂದಲೋ ಅಥವಾ ಮತ್ತಿತರ ಕಾರಣಗಳಿಂದಲೋ ತಂದೆ ತಾಯಂದಿರಿಂದ ದೂರವಿದ್ದು ಜೀವಿಸುವವರ ಕುರಿತು ನಾನು ಬರೆಯುತ್ತಿರುವುದಲ್ಲ. ಹಾಗಿದ್ದರೂ ನೀವು ನಿಮ್ಮ ತಂದೆ ತಾಯಂದಿರು ಏಕಾಂತವಾಗಿರುವುದರ ಬಗ್ಗೆ ಪರಿಹಾರ ಕಂಡುಕೊಳ್ಳಬೇಕು. ಆದರೆ ಒಂದೇ ಊರಲ್ಲಿದ್ದು ಒಂದೇ ನಗರದಲ್ಲಿದ್ದು ಒಂದೇ ಗ್ರಾಮದಲ್ಲಿದ್ದು ಕೂಡಾ ಎಲ್ಲಾ ಮಕ್ಕಳು ಪ್ರತ್ಯೇಕವಾಗಿ ಮನೆ ಮಾಡಿಕೊಂಡು ವೃದ್ಧ ದಂಪತಿಗಳು ಮಾತ್ರ ಏಕಾಂತವಾಗಿ ಇರುವ ಧಾರಾಳ ಉದಾಹರಣೆಗಳಿವೆ. ಈ ಕ್ರೌರ್ಯವು ಎಲ್ಲಾ ಲೆಕ್ಕಾಚಾರವನ್ನೂ ತಲೆಕೆಳಗಾಗಿಸಿದೆ.

## ಸಂರಕ್ಷಿಸಲು ಹತ್ತು ಲಕ್ಷ

ವೃದ್ಧ ಮಾತೆಯೋರ್ವರು ತಾನು ಹೆಚ್ಚು ಪೋಷಿಸಿದ ಮಕ್ಕಳನ್ನು ಕರೆದು, ತನ್ನ ಪೋಷಣೆಯ ಖರ್ಚು ವೆಚ್ಚಕ್ಕಾಗಿ ಟೆಂಡರ್ ಕರೆದರು. ಎಂಟು ಮಂದಿ ಪುತ್ರರಲ್ಲಿ ಕಿರಿಯ ಮಗನು ಅತ್ಯಂತ ಕಡಿಮೆ ಮೊತ್ತ ಬಯಸಿದ್ದ. ತನ್ನನ್ನು ಸಾಕಿ ಸಲಹಲು ಹತ್ತು ಲಕ್ಷ ರೂಪಾಯಿ ಮೊತ್ತ ನೀಡಿದ ಆ ಮಾತೆ ಕಿರಿಯ ಮಗನೊಂದಿಗೆ ಹೊರಟರು.

ಅತ್ಯಂತ ವಿಚಿತ್ರವಾದ ಈ ಏಲಮ್ ಮಾಡಿದ ಘಟನೆ ಪಾಶ್ಚಾತ್ಯ ದೇಶಗಳಲ್ಲಿ ನಡೆದದ್ದಲ್ಲ, ಕೇರಳದಲ್ಲಿಯೇ ನಡೆದದ್ದಾಗಿದೆ.

ತನ್ನ ಮಗುವಿನ ಕೈಯ ಕಾಲಿನ ಬೆಳವಣಿಗೆಯ ಬಗ್ಗೆ ಚಿಂತಿಸುತ್ತಾ ನೆಲದಲ್ಲಿಯೂ ಇಡದೆ ತಲೆಯಲ್ಲಿಯೂ ಹೊತ್ತುಕೊಳ್ಳದೆ ಹಾಲು ಜೇನು ನೀಡಿ ಬೆಳೆಸಿದ ಮಕ್ಕಳು ಅಮ್ಮನ ಮನದ ಪ್ರೀತಿ ವಾತ್ಸಲ್ಯದ ಸಾಗರದಲ್ಲಿ ಮಿಂದು ಬೆಳೆದರು. ನಂತರ ಅವರು ಶ್ರೀಮಂತರಾದರು. ಅದರೊಂದಿಗೆ ಅವರ ಮನಸ್ಸಿಂದ ಅಮ್ಮ ಇಳಿದು ಹೋದರು. ಇಂತಹದ್ದೊಂದು ಕತೆ ಸತ್ಯನ್ ಅಯಿಕ್ಕೋಡ್‌ರವರ 'ಮನಸ್ಸಿನಕ್ಕರೆ' ಎಂಬ ಸಿನಿಮಾದಲ್ಲಿದೆ. ಅದರಲ್ಲಿ ಇಳಿದು ಬಂದ ಎಷ್ಟೋ ಅಮ್ಮಂದಿರು ನಮ್ಮ ನಡುವೆಯಿದ್ದಾರೆ.

ಕೇರಳದ ತ್ರಿಶೂರ್ ನಗರದ ಪ್ರಮುಖ ಕ್ರೈಸ್ತ ವಿಭಾಗಕ್ಕೆ ಸೇರಿದ ಎಂಬತ್ತು ಪ್ರಾಯ ದಾಟಿದ ಮಾತೆಯ ಕತೆಯೂ ಪ್ರಸಕ್ತ ಸನಿವೇಶದ ವಾಸ್ತವಿಕತೆಯನ್ನು ವಿವರಿಸುತ್ತಿದೆ. ಚಿನ್ನಾಭರಣಗಳ ಮಳಿಗೆಯಿರುವ ಕೃಷಿ ಮತ್ತಿತರ ವ್ಯವಹಾರವಿರುವ ಶ್ರೀಮಂತ ಕುಟುಂಬವದು. ತಂದೆಯದ್ದು ಸ್ವಾಭಿಮಾನದ ಗುಣವಾದರೆ ಅಮ್ಮನದ್ದು ತುಂಬಾ ಸಾಧು ಸ್ವಭಾವ. ಒಂಬತ್ತು ಮಕ್ಕಳಲ್ಲಿ ಏಕೈಕ ಹೆಣ್ಮಗಳಿದ್ದಾಳೆ. ಗಂಡು ಸಿಂಹ ಗಳಲ್ಲಿ ನಾಲ್ವರಿಗೂ ಚಿನ್ನಾಭರಣಗಳ ಮಳಿಗೆಯಿದೆ. ಈರ್ವರು ಚಿನ್ನದ ವ್ಯಾಪಾರಿಗಳು. ಈರ್ವರು ಹೊರದೇಶದಲ್ಲಿದ್ದಾರೆ. ಮಗಳು ಪತಿಯೊಂದಿಗೆ ಕೊಯಮತ್ತೂರಿನಲ್ಲಿದ್ದಾಳೆ.

ತಂದೆ ಎರಡು ವರ್ಷಗಳ ಹಿಂದೆ ನಿಧನರಾದರು. ಆ ನಂತರ ಆ ತಾಯಿಯ ದುರಂತ ಜೀವನ ಆರಂಭವಾಯಿತು. ತಂದೆ ಜೀವಂತವಿರುವಾಗಲೇ ಆಸ್ತಿ ಹಂಚಿಕೆ ಯಾಗಿತ್ತು. ಆಗ ಆ ಮಾತೆಯನ್ನು ಸಲಹುವವರು ಯಾರೆಂಬ ಪ್ರಶ್ನೆ ಉದ್ಭವಿಸಿತ್ತು. ತಾಯಿಯ ಹೆಸರಲ್ಲಿ ಜಮೀನು ಮತ್ತು ಲಕ್ಷಾಂತರ ಹಣವು ಬ್ಯಾಂಕಲ್ಲಿತ್ತು.

ಮಕ್ಕಳ ಗುಣ ಸ್ವಭಾವಗಳ ಬಗ್ಗೆ ಅರಿತಿದ್ದ ತಂದೆ ಮೊದಲೇ ಈ ತಾಯಿಯ ಹೆಸರಲ್ಲಿ ಸ್ವಲ್ಪ ಸೊತ್ತು ಬರೆದಿದ್ದರು. ತಂದೆಯ ನಿಧನದ ಬಳಿಕ ಆ ತಾಯಿ ಒಂದೊಂದೇ ಮಕ್ಕಳ ಮನೆಯಲ್ಲಿ ಬದಲಿಸುತ್ತಾ ಬದುಕುತ್ತಿದ್ದರು. ಮಕ್ಕಳ ಮನದ ಇಂಗಿತವೇನೆಂದು ಆ ಅಮ್ಮ ಅರ್ಥೈಸಿದಾಗ ಈ ಆಫರ್ ಘೋಷಿಸಿದ್ದರು. ಅದರೊಂದಿಗೆ ಏಲಮ್ ಕರೆದರು. ಒಂಬತ್ತು ಮಕ್ಕಳೂ ತಮಗೆ ಬೇಕಾದ ಮೊತ್ತವನ್ನೂ ಹೇಳಿಬಿಟ್ಟರು. ಇದರಲ್ಲಿ ಚಿನ್ನಾಭರಣಗಳ ಮಳಿಗೆಯ ಮಾಲಕನಾಗಿದ್ದ ಕಿರಿಯ ಪುತ್ರ ಅತೀ ಕಡಿಮೆ ಮೊತ್ತವನ್ನು ನಿಶ್ಚಯಿಸಿ ಘೋಷಿಸಿದ್ದ. ಆತ ಹತ್ತು ಲಕ್ಷ ನೀಡಿದರೆ ಅಮ್ಮನನ್ನು ಸಲಹುತ್ತೇನೆಂದು ಘೋಷಿಸಿದ್ದ. ಇನ್ನೊಬ್ಬ ಇಪ್ಪತ್ತು ಲಕ್ಷದ ಬೇಡಿಕೆಯಿಟ್ಟಿದ್ದ. ಕಿರಿಯ ಪುತ್ರನ ಅತೀ

ಕಡಿಮೆ ಕೊಟೇಶನ್ ಅಮ್ಮ ಸ್ವೀಕರಿಸಿದ್ದರು. ಆ ಹಣವನ್ನು ಮಗನ ಕೈಗೆ ಒಪ್ಪಿಸಿದರು. ಹಾಗೆಯೇ ಆ ಅಮ್ಮ ಮಗನೊಂದಿಗೆ ಜೀವಿಸತೊಡಗಿದರು. ಅಮ್ಮನ ಬ್ಯಾಂಕ್ ಖಾತೆಯಲ್ಲಿ ಇನ್ನೂ ಹಣವಿದೆ. ಹಿರಿಯ ಮಗ ವಾಸಿಸುತ್ತಿರುವ ಕುಟುಂಬದ ಮನೆಯೂ ಅಮ್ಮನ ಹೆಸರಲ್ಲಿದೆ. ಕಿರಿಯ ಮಗ, ಸೊಸೆ, ಹಾಗೂ ಮೂವರು ಮೊಮ್ಮಕ್ಕಳ ಜೊತೆ ಆ ಮಾತೆ ವಾಸಿಸುತ್ತಿ ದ್ದಾರೆ. ಆ ಮನೆಯ ಹೆಸರು ಪ್ರಶಾಂತಿ ಎಂದಾಗಿದೆ.

## ಹುಳು ತಿಂದು ಮುಗಿಸಿದ ಮೃತದೇಹ

ಕೇರಳದ ಪ್ರಮುಖ ಮನೆತನಕ್ಕೆ ಸೇರಿದ ವಯೋವೃದ್ಧೆಯಾದ ಆ ಮಾತೆಗೆ ಇಬ್ಬರು ಪುತ್ರರಿದ್ದಾರೆ. ಮಗಳು ಹೊರರಾಜ್ಯದಲ್ಲಿದ್ದಾಳೆ. ಪುತ್ರ ಪ್ರಸಿದ್ಧ ವೈದ್ಯ. ಅವರು ವಿಶಾಲವಾದ ಆ ಮನೆಯಲ್ಲಿ ಏಕಾಂತ ಜೀವನ ಸಾಗಿಸುತ್ತಿದ್ದಾರೆ. ಒಂದು ದಿನ ಪಕ್ಕದ ಮನೆಯವರು ಮದುವೆಯ ಆಮಂತ್ರಣ ನೀಡಲು ಬಂದಿದ್ದರು. ಎಷ್ಟೇ ಬೆಲ್ ಮಾಡಿ ದರೂ ಬಾಗಿಲು ಬಡಿದರೂ ಬಾಗಿಲು ತೆರೆಯುತ್ತಿಲ್ಲ, ಕೊನೆಗೆ ನೆರೆಮನೆಯವರಿಗೆ ಸುದ್ದಿ ಮುಟ್ಟಿಸಿದರು. ಅವರು ಬಂದ ಬಳಿಕ ಬಾಗಿಲು ಒಡೆದು ಮನೆಯೊಳಗೆ ಪ್ರವೇಶಿ ಸಲಾಯಿತು. ಆಗ ಅವರಿಗೆ ಕಂಡದ್ದು ವೇದನಾಜನಕ ದೃಶ್ಯ. ಮಂಚದಲ್ಲಿ ತಾಯಿಯ ಅಸ್ಥಿಪಂಜರ ಮಾತ್ರ ಇತ್ತು. ಚರ್ಮ ಮಾಂಸವೆಲ್ಲಾ ಇರುವೆಗಳು ತಿಂದು ಮುಗಿಸಿದ್ದು ವು. ಈ ಸಾವು ಸಂಭವಿಸಿ ತಿಂಗಳುಗಳೇ ಕಳೆದಿದ್ದುವು. ಆ ತಾಯಿಯನ್ನು ಬಂದು ನೋಡುವುದಾಗಲೀ ಕುಶಲ ವಿಚಾರಿಸುವುದಾಗಲೀ ಮಕ್ಕಳು ಮಾಡುತ್ತಿರಲಿಲ್ಲ, ಕನಿಷ್ಠ ಫೋನ್ ಕೂಡಾ ಮಾಡುತ್ತಿರಲಿಲ್ಲ, ಹಾಗೆ ಆ ತಾಯಿಯ ಸಾವನ್ನು ಯಾರೂ ಅರಿಯದೆ ಹೋದರು. ಇವೆಲ್ಲ ನಮ್ಮ ಮನದಲ್ಲಿ ಅಚ್ಚಳಿಯದೆ ಉಳಿಯುವ ವಾರ್ತೆಗಳು.

## ಹೃದಯ ಮಿಡಿಯುವ ಕತೆಯಿದು

ಸಾಮಾಜಿಕ ಜಾಲತಾಣಗಳಲ್ಲಿ ಬಂದ ಹೃದಯ ಮಿಡಿಯುವಂತಹಾ ಕತೆಗಳಲ್ಲಿ ಇದೂ ಒಂದು:

ಒಮ್ಮೆ ಒಂದು ಹೋಟೆಲ್‌ಗೆ ಹೋಗಿದ್ದೆ. ಅಲ್ಲಿ ಎಲೆಯನ್ನು ಹಾಸಿ ಊಟವನ್ನು ಬಡಿಸಲು ಸಿದ್ದವಾದಾಗ, 'ಓರ್ವರು ಈ ಊಟದ ಬೆಲೆ ಎಷ್ಟು?' ಎಂದು ಕೇಳಿದರು.

'ಮೀನು ಫ್ರೈ ಸೇರಿದರೆ 50 ರೂಪಾಯಿ, ಮೀನು ಬೇಡವಾದರೆ ಮೂವತ್ತು ರೂಪಾಯಿ' ಎಂದಾತ ಉತ್ತರಿಸಿದ. ಜೇಬಿನಲ್ಲಿದ್ದ ಹತ್ತು ರೂಪಾಯಿ ತೆಗೆದು ಆತನ ಕೈಯಲ್ಲಿಟ್ಟು, 'ನನ್ನಲ್ಲಿ ಇಷ್ಟು ಮಾತ್ರ ಇರುವುದು. ಇದಕ್ಕಾಗುವಷ್ಟು ಊಟ ನೀಡಿದರೆ

ಸಾಕು. ಬರೀ ಊಟವಾದರೂ ಪರವಾಗಿಲ್ಲ ತನ್ನ ಹಸಿವು ನೀಗಿದರೆ ಸಾಕು. ನಿನ್ನೆ ಮದ್ಯಾಹ್ನದಿಂದ ಏನೂ ತಿಂದಿಲ್ಲ' ಎಂದು ಹೇಳಿದರು. ಇದನ್ನು ಹೇಳುವಾಗ ಆ ವ್ಯಕ್ತಿಯ ಧ್ವನಿ ಗದ್ಗದಿತವಾಯಿತು. ಆತ ಮೀನು ರಹಿತವಾಗಿ ಊಟ ಬಡಿಸಿ ಹೋದನು.

ನಾನು ಆ ವ್ಯಕ್ತಿ ಊಟ ಮಾಡುತ್ತಿದ್ದುದನ್ನೇ ದಿಟ್ಟಿಸಿ ನೋಡಿದೆ. ಅವರ ಕಣ್ಣಿಂದ ಹನಿಗಳು ಉದುರುತ್ತಿದ್ದುವು. ಅದನ್ನು ಒರೆಸುತ್ತಾ ಸಣ್ಣ ಮಕ್ಕಳಂತೆ ಅವರು ಮೆಲ್ಲನೆ ಊಟ ಮಾಡುತ್ತಿದ್ದರು. ಇದನ್ನು ನೋಡಿದ ಪಕ್ಕದಲ್ಲಿದ್ದವರು, 'ತಾವು ಯಾಕೆ ಅಳುತ್ತಿದ್ದೀರಿ?' ಎಂದು ಕೇಳಿದರು.

ನನ್ನ ಕಳೆದು ಹೋದ ದಿನಗಳ ಕುರಿತು ನಾನು ಚಿಂತಿಸುತ್ತಾ ಅತ್ತು ಬಿಟ್ಟೆ, ನನ್ನದು ಇಬ್ಬರು ಪುತ್ರರು ಮತ್ತು ಓರ್ವ ಪುತ್ರಿ ಹೀಗೆ ಮೂರು ಮಕ್ಕಳಿದ್ದ ಸಣ್ಣ ಕುಟುಂಬ. ಮೂವರು ಮಕ್ಕಳಿಗೂ ಉತ್ತಮ ಉದ್ಯೋಗವಿದೆ. ನನಗೆ ಸಿಗದ ಎಲ್ಲಾ ಸೌಲಭ್ಯಗಳನ್ನು ನಾನು ಅವರಿಗೆ ನೀಡಿದೆ. ಅದಕ್ಕಾಗಿ ನಾನು ನನ್ನ ಯೌವನವನ್ನೇ ತ್ಯಾಗ ಮಾಡಿದೆ. 28 ವರ್ಷಗಳ ಕಾಲ ಗಲ್ಫ್‌ನಲ್ಲಿದ್ದೆ. ನನಗೆ ನೆರಳಾಗಿದ್ದ ನನ್ನಾಕೆ ನನ್ನನ್ನು ಅಗಲಿ ಹೋದಳು. ನನ್ನ ಸೊತ್ತು ಹಂಚಿಕೆಯಾಗು ವವರೆಗೆ ನನ್ನ ಬಗ್ಗೆ ಅವರಿಗೆ ಕಾಳಜಿ ಇತ್ತು. ಮಕ್ಕಳಿಗೂ ಅಳಿಯನಿಗೂ ನನ್ನ ಸೊತ್ತು ಹಂಚಿಕೆ ಮಾಡಿದ ಬಳಿಕ ನಾನು ಅವರಿಗೆ ಭಾರವಾದೆ. ನಾನು ಮಾಡಿದ್ದೆಲ್ಲವೂ ಅವರಿಗೆ ತಪ್ಪಾಗಿ ಕಾಣುತ್ತಿತ್ತು. ನನ್ನನ್ನು ಸಿಕ್ಕಿದ್ದಕ್ಕೆಲ್ಲಾ ಗದರಿಸತೊಡಗಿದರು. ನಾನು ಓರ್ವ ವೃದ್ಧನಲ್ಲವೇ. ಆ ಒಂದು ಪ್ರಜ್ಞೆಯಾದರೂ ಅವರಲ್ಲಿರಬೇಕಿತ್ತು. ಅವರು ಅದನ್ನು ಪರಿಗಣಿಸಲಿಲ್ಲ, ಅವರೆಲ್ಲರೂ ಊಟ ಮಾಡಿದ ಬಳಿಕವೇ ನಾನು ಊಟ ಮಾಡುತ್ತಿದ್ದೆ. ಆದರೂ ನನಗೆ ಕೇಳುವಂತೆ ತಪ್ಪು ಆರೋಪ ಹೊರಿಸುತ್ತಿದ್ದರು. ಆಹಾರ ಸೇವಿಸುವಾಗ ಕಣ್ಣೀರು ಸುರಿದು ಆಹಾರವು ಉಪ್ಪಿನ ರುಚಿ ಯಾಗುವುದು. ಮೊಮ್ಮಕ್ಕಳು ಕೂಡಾ ನನ್ನೊಂದಿಗೆ ಮಾತನಾಡಲು ಬರುವುದಿಲ್ಲ. ಮೊಮ್ಮಕ್ಕಳು ಮಾತನಾಡಿದರೆ ಮಕ್ಕಳಿಗೆ ಕೋಪ ಬರುವುದು. 'ಇದು ಎಲ್ಲಿಯಾದರೂ ಹೋದರೆ ಸಾಕಿತ್ತು' ಎಂಬ ಚುಚ್ಚು ಮಾತುಗಳು ನಿರಂತರ ಕೇಳಬೇಕಾಯಿತು. ನಾನು ವಿದೇಶದಲ್ಲಿ ರಕ್ತವನ್ನು ಬೆವರನ್ನಾಗಿಸಿ ದುಡಿದು ಗಳಿಸಿದ ಹಣದಿಂದ ನಾನು ಮತ್ತು ನನ್ನಾಕೆ ಸರಿಯಾಗಿ ತಿನ್ನದೆ ಕುಡಿಯದೆ ಸಂಗ್ರಹಿಸಿಟ್ಟ ಹಣದಿಂದ ಕಟ್ಟಿದ ಮನೆಯದು. ಅದು ಅವಳ ನೆನಪನ್ನು ತರಿಸುವ ಮನೆ. ಅದನ್ನು ತೊರೆದು ಹೋಗಲು ಮನಸ್ಸು ಒಪ್ಪುತ್ತಿರಲಿಲ್ಲ. ಆದರೆ ನಿನ್ನೆ ನಾನು ಹೊರ ಬರಲೇ ಬೇಕಾಯಿತು. ಸೊಸೆಯ ಸರವನ್ನು ಕಳವು ಮಾಡಿದ ಆರೋಪ ನನ್ನ ಮೇಲೆ ಬಿತ್ತು. ಮಗ ಕೋಪದಿಂದ ಗದರಿಸಿದ; ಆದರೆ ನನ್ನ ಪುಣ್ಯಕ್ಕೆ ಹೊಡೆಯಲಿಲ್ಲ. ಇನ್ನು ಅಲ್ಲಿ ನಿಂತರೆ ಅದೂ ಆಗುತ್ತಿತ್ತು.

ತಂದೆಯ ಮೇಲೆ ಕೈಮಾಡಿದ ಪುತ್ರ ಎಂಬ ಕೆಟ್ಟ ಹೆಸರು ಆತನ ಮೇಲೆ ಬರುವುದು ಬೇಡ. ಸಾಯಲು ಅಂಜಿಕೆಯಿಲ್ಲ. ಆದರೂ ಇನ್ನು ಬದುಕುವುದು ಯಾರಿಗಾಗಿ? ಎನ್ನುತ್ತಾ ಅವರು ಸಂಪೂರ್ಣವಾಗಿ ಊಟ ಮಾಡಿ ಮುಗಿಸದೆ ಅಲ್ಲಿಂದ ಎದ್ದರು. ತನ್ನ ಕೈಯಲ್ಲಿದ್ದ ಹತ್ತು ರೂಪಾಯಿ ನೋಟನ್ನು ನೀಡಿದರು.

ಹೋಟೆಲ್ ಮಾಲೀಕನು 'ಬೇಡ, ಇದು ನಿಮ್ಮಲ್ಲಿಯೇ ಇರಲಿ. ನಿಮಗೆ ಇಲ್ಲಿ ಯಾವಾಗ ಬೇಕಾದರೂ ಬಂದು ಊಟ ಮಾಡಬಹುದು' ಎಂದು ಹೇಳಿದ.

ಆದರೆ ಆ ವ್ಯಕ್ತಿ ಮಾತ್ರ ಹತ್ತು ರೂಪಾಯಿಯನ್ನು ಟೇಬಲ್ ಮೇಲಿಟ್ಟು, 'ನಿಮ್ಮ ಉತ್ತಮ ಮನಸ್ಸಿಗೆ ಧನ್ಯವಾದಗಳು. ಸುಖಾ ಸುಮ್ಮನೆ ಪುಕ್ಕಟೆಯಾಗಿ ಊಟ ಮಾಡಿ ಅಭ್ಯಾಸವಿಲ್ಲ. ಅನ್ಯಥಾ ಭಾವಿಸಬೇಡಿ. ಇನ್ನೊಮ್ಮೆ ಬೇಟಿಯಾಗೋಣ' ಎನ್ನುತ್ತಾ ಆ ಬೆತ್ತವನ್ನು ಊರಿಕೊಂಡು ಅವರು ಎಲ್ಲಿಗೋ ಮುಂದೆ ಸಾಗಿದರು.

ಅವರು ನನ್ನ ಮನಸ್ಸಿಗೆ ಮಾಡಿದ ಗಾಯ ಇನ್ನೂ ನನ್ನಲ್ಲಿ ಹಸಿಯಾಗಿದೆ. ಎಲ್ಲಾ ಹಸಿ ಎಲೆಗಳು ಒಮ್ಮೆ ಹಣ್ಣಾಗಲಿಕ್ಕಿದೆ ಎಂಬುದನ್ನು ಯಾಕೆ ಯಾರೂ ಚಿಂತಿಸುತ್ತಿಲ್ಲ.

ಹೀಗೇ ಅಮಾನುಷವಾಗಿ, ಅನ್ಯಾಯವಾಗಿ, ಕ್ರೂರವಾಗಿ ನಿರ್ಲಕ್ಷಿಸಲ್ಪಡುವ ಅದೆಷ್ಟೋ ಮಾತಾಪಿತರು ಈ ಸಮಾಜದಲ್ಲಿದ್ದಾರೆ. ಆದರೆ ಈ ಮಾತಾಪಿತರು ಅನುಭವಿಸುವಂತಹಾ ದುರವಸ್ಥೆ ಕೇವಲ ನಿರ್ಲಕ್ಷತೆ ಮತ್ತು ಹೊರದಬ್ಬುವಿಕೆಗೆ ಮಾತ್ರ ಸೀಮಿತವಾಗಿಲ್ಲ, ಅವರ ಮೇಲೆ ಕ್ರೂರವಾಗಿ ಹಲ್ಲೆ ನಡೆಸುವ ಮಕ್ಕಳೂ ಈ ಸಮಾಜದಲ್ಲಿದ್ದಾರೆ. ಅಷ್ಟು ಮಾತ್ರವಲ್ಲ, ಮಕ್ಕಳು ತಂದೆ ತಾಯಂದಿರನ್ನು ಇರಿದು, ನೀರಿಗೆ ತಳ್ಳಿ ಹಾಕಿ, ವಿಷಪ್ರಾಶನ ಮಾಡಿಸಿ ಕೊಂದ ವರದಿಗಳನ್ನೂ ನಾವು ಕೇಳಬೇಕಾಗಿ ಬಂದಿದೆ.



# ಈ ನಿರ್ಲಕ್ಷ್ಯಕ್ಕೆ ಕಾರಣಗಳನ್ನು ಹುಡುಕಿದಾಗ

ಕೈಕಾಲುಗಳು ಶಕ್ತಿ ಕಳೆದುಕೊಂಡು ಯಾವುದೇ ಕೆಲಸಗಳನ್ನು ಮಾಡದೇ ಇದ್ದು ದೇಹದ ಶಕ್ತಿಯು ಕ್ಷೀಣಿಸಿರುವಂತೆ, ಬದುಕಿನಲ್ಲಿ ಆಹಾರ ಸವಲತ್ತುಗಳು ಯಥೇಚ್ಚವಾಗಿ ದೊರೆತರೂ ಮಾತಾಪಿತರು ಇಷ್ಟೊಂದು ನಿರ್ಲಕ್ಷತೆಗೆ ಗುರಿಯಾಗಲು ಕಾರಣ ಏನಿರ ಬಹುದು? ಅವರ ಸಂರಕ್ಷಣೆಯ ಪ್ರಕ್ರಿಯೆ ತೀರಾ ಕಡಿಮೆಯಾಗುತ್ತಾ ಬಂದಿದೆ. ಎಲ್ಲಾ ರೀತಿಯ ಆಧುನಿಕ ಸುಖ ಸವಲತ್ತುಗಳು ಇರುವಾಗ ನಿಜವಾಗಿ ಮಾತಾಪಿತರು ಹೆಚ್ಚು ಹೆಚ್ಚು ಸಂರಕ್ಷಣೆಗೆ ಒಳಗಾಗಬೇಕಿತ್ತು. ಆದರೂ ಯಾಕೆ ಹೀಗಾಗುತ್ತಿದೆ?

ಆಧುನಿಕ ಬದುಕಿನ ನಾಗರಿಕತೆಯ ತಳಹದಿಯಲ್ಲಿರುವ ಲೌಕಿಕವಾದ ಗಳಿಕೆಯು ಜನರನ್ನು ಇಂತಹದ್ದೊಂದು ಸ್ಥಿತಿಗೆ ಕೊಂಡೊಯ್ದಿದೆ. ಸ್ವಲ್ಪ ಬಿಡಿಸಿ ಹೇಳಬೇಕಾದರೆ ಮನುಷ್ಯನ ಬದುಕಿಗೆ ಸಂಬಂಧಿಸಿದ ನಮ್ಮ ಅವಿವೇಕದ ನಿರ್ಧಾರಗಳು ಸಮಾಜವನ್ನು ಈ ದುಃಸ್ಥಿತಿಗೆ ಕೊಂಡೊಯ್ದಿದೆ.

ಲೌಕಿಕವಾಗಿ ನೋಡುವಾಗ ಮನುಷ್ಯ ಕೇವಲ ಒಂದು ಮೃಗ. ಮಾತನಾಡುವ ಮೃಗ ಎಂದು ಹಿಂದಿನ ಕಾಲದಲ್ಲಿ ಆತನನ್ನು ಪರಿಚಯಿಸಲಾಗಿತ್ತು. ಚಾರ್ಲ್ಸ್ ಡಾರ್ವಿನ್ ಮನುಷ್ಯನಿಗೆ ಸಂಬಂಧಿಸಿ ಹೇಳುವಾಗಲೆಲ್ಲಾ ಆತನ ದೇಹದ ಕುರಿತು ಅದರಿಂದ ಉಂಟಾದ ಪರಿಣಾಮ ಮತ್ತು ಪರಿವರ್ತನೆಯ ಕುರಿತು ಪ್ರಸ್ತಾಪಿಸುತ್ತಾನೆ.

ಅದನ್ನು ಫೆಡ್ರಿಕ್ ಏಂಗಲ್ಸ್ ವಿವರಿಸುತ್ತಾ ಹೀಗೆಂದಿದ್ದಾನೆ: ಕೈಯು ಕೆಲಸ ಮಾಡು ವಂತಹ ಒಂದು ವಸ್ತುವಲ್ಲ. ಅದು ಕೆಲಸ ಮಾಡುವ ಒಂದು ಉತ್ಪನ್ನವಾಗಿದೆ. ಕೆಲಸದ ಮೂಲಕ ಮನುಷ್ಯನ ಕೈ ಭಾರೀ ಮಟ್ಟದ ಪರಿಪೂರ್ಣತೆ ಗಳಿಸಿತು. ಅದರಿಂದ ರಾಫೇಲ್‌ನ ಚಿತ್ರಗಳು, ಥೋರ್ ವಾಟ್ ಸೇನ್‌ನ ಶಿಲ್ಪಗಳು, ಪಗಾನಿಯ ಸಂಗೀತ ರಚಿಸಲು ಸಾಧ್ಯವಾಯಿತು.

ಇವೆಲ್ಲವನ್ನೂ ಕೈಗಳು ಮಾತ್ರ ಮಾಡುವುದಿಲ್ಲ ಎಂಬ ವಿಚಾರವನ್ನು ಏಂಗಲ್ಸ್

ಸ್ಮರಿಸಿದ್ದರು. ಕೈ ಇದ್ದವರೆಲ್ಲರೂ ಚಿತ್ರ ರಚಿಸುವುದಾಗಲೀ ಶಿಲ್ಪ ಕೆತ್ತುವುದಾಗಲೀ ಸಂಗೀತ ರಚಿಸುವುದಾಗಲೀ ಮಾಡುತ್ತಿಲ್ಲವಲ್ಲ. ಕೈ ಇಲ್ಲದವರೂ ಅದನ್ನು ಮಾಡುತ್ತಿರುತ್ತಾರೆ.

ಮಕ್ಕಳಿಗಾಗಿ ಮಲಯಾಳಮ್‌ನಲ್ಲಿ ರಚಿಸಲಾದ ಕೃತಿಯೊಂದರಲ್ಲಿ ಇದನ್ನು ಬಹಳ ವಿಸ್ತಾರವಾಗಿ ಬರೆಯಲಾಗಿದೆ. ಅದರ ಪ್ರಕಾರ ನಮ್ಮ ಪೂರ್ವಜರು ಕಾಡು ಮೇಡು ಗಳಲ್ಲಿರುವ ಮರಗಳ ಮೇಲೆ ಹಾರಾಡುವ ವಾನರರಾಗಿದ್ದರು. ಅಲ್ಲಿರುವ ಹಣ್ಣುಗಳನ್ನು ಕಿತ್ತು ತಿಂದು ಜೀವಿಸುತ್ತಿದ್ದರು. ಹಣ್ಣುಗಳು ಮುಗಿದ ಬಳಿಕ ನೆಲಕ್ಕೆ ಇಳಿದು ಬಂದರು. ನಂತರ ತರಕಾರಿಗಳನ್ನು ತಿನ್ನತೊಡಗಿದರು. ಮರದಲ್ಲಿರುವ ಹಣ್ಣುಗಳನ್ನು ಕೀಳಲು ಎಸೆ ಯಲು ಮುಂದಿನ ಕಾಲುಗಳನ್ನು ಬಳಸಿದರು. ಕ್ರಮೇಣ ಅದು ಕೈಗಳಾಗಿ ಬದಲಾಯಿತು. ಬಾಲವು ನಿದಾನವಾಗಿ ಇಲ್ಲದಾಯಿತು. ರೋಮಗಳು ಉದುರಿದವು ಗಡ್ಡ ಬೆಳೆಯಿತು. ಬೆನ್ನು ಮೂಳೆ ನೇರವಾಯಿತು. ಹೀಗೆ ವಾನರ ಮಾನವನಾಗಿ ಬದಲಾದನು. (ಚಿಂತ ಪಬ್ಲಿಕೇಶನ್ ಪ್ರಕಟಿಸಿದ 'ಬಾಲ ಸಂಘ ಯಾಕೆ' ಎಂಬ ಪುಸ್ತಕದಿಂದ)

ಕೆಲವು ಲೌಕಿಕವಾದಿಗಳು ಮನಸ್ಸು ಕೂಡಾ ಕೈಗಳು ಮಾಡಿದ ಕೆಲಸದಿಂದ ರೂಪು ಗೊಂಡಿದೆ ಎಂದು ಹೇಳುತ್ತಾರೆ. ಹೆಚ್ ಬೆರ್ ಬರೆಯುತ್ತಾರೆ. ಮನುಷ್ಯನ ಕೈಗಳು ಅವನ ಮನಸ್ಸಿಗೆ ಸಂಬಂಧಿಸಿದ ಅಭಿವೃದ್ಧಿಯ ಹೇತುವಾಗಿ ಪ್ರೇರಣೆ ನೀಡಿದೆ.

## ಬದುಕಿನ ನೋಟ

ಮಾನವನು ಶರೀರ ಕೇಂದ್ರಿತವಾದ ಪ್ರಾಣಿಯಾಗಿದ್ದರೆ, ಅವನ ಜೀವನದ ಗುರಿಯು ಸಹಜವಾಗಿಯೇ ದೈಹಿಕ ಬಯಕೆಯ ಈಡೇರಿಕೆಯಾಗಿರುತ್ತದೆ. ಮನಸ್ಸಿನ ಮತ್ತು ಆತ್ಮದ ಅಗತ್ಯಗಳನ್ನು ನಿರ್ಲಕ್ಷಿಸುವುದು ಅನಿವಾರ್ಯವಾಗಿದೆ. ಕಾರ್ಲ್ ಮಾರ್ಕ್ಸ್ ಬರೆಯುತ್ತಾರೆ: ನಮ್ಮ ಯೋಚನೆ, ಪ್ರಜ್ಞೆಗಳು ಇಂದ್ರಿಯಗಳಿಗೆ ಅಗೋಚರ ವಾಗಿದ್ದರೂ ಭೌತಿಕ ದೇಹದ ಅಂಗವಾದ ಮಸ್ತಿಷ್ಕದ ಸೃಷ್ಟಿಯಾಗಿ ಗಣಿಸಲ್ಪಡುತ್ತದೆ.

ಭೌತಿಕವಾಗಿ ನೋಡುವುದಾದರೆ ಜೀವನದ ಗುರಿಯು ತಿನ್ನುವುದು, ಕುಡಿಯು ವುದು, ಭೋಗ, ಸುಖ, ಮನರಂಜನೆ ಮುಂತಾದ ದೈಹಿಕ ಅಗತ್ಯಗಳ ಪೂರ್ತೀಕರಣ ವಾಗಿದೆ. ನಾಸ್ತಿಕ ಚಿಂತಕ ಆಲ್ಡಸ್ ಎಕ್ಸಲ್ ಬರೆಯುತ್ತಾರೆ: ನಿಮಗೆ ಇಂದು ಆಸ್ವದಿಸಲು, ಅನುಭವಿಸಲು ಸಿಗುವ ಸುಖವನ್ನು ಯಾವುದೇ ಕಾರಣಕ್ಕೂ ನಾಳೆಗೆ ಮುಂದೂಡ ಬಾರದು. ಪ್ರಮುಖ ಸ್ವಿಸ್ ಚಿಂತಕ ಕಾರ್ಲ್ ಜಾಸ್ಪರ್ಸ್ ಬರೆಯುತ್ತಾರೆ: ಬದುಕಿನ ದಾರಿಯಲ್ಲಿ ಸ್ಥಿರವಾಗಿ ನೀಡುವಂತಹದ್ದು ಅನುಭೂತಿ ಮಾತ್ರವಾಗಿರುತ್ತದೆ.

ಮಲಯಾಳಮ್ ಕವಿಯೊಬ್ಬ ಹೀಗೆ ಹಾಡಿರುತ್ತಾನೆ:

ಏನು ಬಂದರೂ ಆಸ್ವಾದಿಸಬೇಕು,
ದ್ರಾಕ್ಷೆಯ ಮದಿರೆಯಂತಹ ಬದುಕು
ಎಂದೆಂದಿಗೂ ಆ ಲಹರಿಯಾನಂದ
ತುಂದಿಲ ನನ್ನ ಮನ ಮೊಳೆತು ಹಾರಾಡಲಿ.

ಜೀವನದ ಪ್ರಮುಖ ಗುರಿ ಸುಖಾಸ್ವಾದನೆ ಪಡೆಯುವುದಾಗಿ ಮಾರ್ಪಟ್ಟು, ಅದಕ್ಕೆ ಬರುವಂತಹ ಅಡೆ ತಡೆಗಳನ್ನು ಮೆಟ್ಟಿ ದೂರ ಮಾಡುವುದು ಅನಿವಾರ್ಯವಾಗಿ ಬಿಟ್ಟಿತು. ಹೀಗೆ ಲೌಕಿಕ ಬದುಕಿನಲ್ಲಿ ಉಪಯೋಗಕ್ಕೆ ಇಲ್ಲದ್ದನ್ನೆಲ್ಲವನ್ನೂ ತೊರೆಯಬೇಕೆಂಬ ಭಾವನೆ ಬೆಳೆಯುತ್ತಾ ಬಂತು.

## ಸ್ವಾರ್ಥ ಮೂರ್ತಿಗಳು

ಮಾನವನೆಂದರೆ ದೇಹ ಎಂಬುದು ಅಂಗೀಕೃತಗೊಂಡಾಗ ಜೀವನವು ದೇಹ ಕೇಂದ್ರಿತವಾಗಿ ಮಾರ್ಪಟ್ಟಿತು. ಮನುಷ್ಯನು ದೈಹಿಕ ಸುಖದ ದಾಸನಾಗಿ ಮಾರ್ಪಟ್ಟನು. ಅವನ ಸಕಲ ಪರಿಶ್ರಮವು ದೇಹೇಚ್ಛೆಯ ಪೂರ್ತೀಕರಣದ ಭಾಗವಾಯಿತು. ದೇಹೇಚ್ಛೆಯ ದಾಸನಾದಾಗ ಅವನ ಎಲ್ಲಾ ಪರಿಶ್ರಮಗಳಿಂದ ಒಳಿತುಗಳು ಮಾಯ ವಾಯಿತು. ಪ್ರೀತಿ, ಕರುಣೆ, ವಾತ್ಸಲ್ಯ, ದಯೆ, ಸಹನೆ, ತಾಳ್ಮೆ, ನಯ-ವಿನಯ, ಉದಾರತೆ, ಅನುಕಂಪ, ಸೌಮ್ಯತೆ ಮುಂತಾದ ಸದ್ಗುಣಗಳೆಲ್ಲವೂ ಮಾನವ ಮನಸ್ಸಿಂದ ದೂರವಾಯಿತು. ಹೀಗೆ ಮಾನವ ಮನಸ್ಸು ಮರುಭೂಮಿಯಾಯಿತು. ಅವನು ಸಂವೇದನೆಯಿಲ್ಲದ ಸ್ವಾರ್ಥಮೂರ್ತಿಯಾದನು.

ನಿಷ್ಪ್ರಯೋಜಕವಾದುದೆಲ್ಲವನ್ನೂ ಕೈಬಿಡುವ ನಿಲುವು ಮನುಷ್ಯನಲ್ಲಿ ಬೆಳೆದು ಬಂದಾಗ, ಯಾವುದೇ ದುಡಿಮೆಯಿಲ್ಲದ, ಬೇರೆ ಯಾವುದೇ ರೀತಿಯ ಆದಾಯವಿಲ್ಲದ ಮಾತಾಪಿತರು ರೋಗಗಳ ದಾಸರಾಗಿ, ಆಸ್ಪತ್ರೆ ಮತ್ತು ಔಷಧಿಗಳಿಗೆ ವೆಚ್ಚ ಮಾಡ ಬೇಕಾಗಿ ಬಂದಾಗ ಮಕ್ಕಳಿಗೆ ಭಾರವಾಗುತ್ತಾರೆ. ಅವರು ಒಂದು ಕಿರುಕುಳ ಮತ್ತು ಶಾಪವಾಗಿ ಕಾಣತೊಡಗುತ್ತಾರೆ. ಹೀಗೆ ಅವರು ನಮ್ಮ ಸ್ವಸ್ಥ ಜೀವನಕ್ಕೆ ಅಡ್ಡಿಯಾಗುತ್ತಿದ್ದಾರೆಂದು ಬಗೆಯುವ ಮಕ್ಕಳುತಮ್ಮ ತಂದೆ ತಾಯಂದಿರನ್ನು ಸಂರಕ್ಷಿಸಬೇಕೆಂಬ ಕರ್ತವ್ಯವನ್ನು ಮರೆತರು. ಅದರ ಜೊತೆಗೆ ಧರ್ಮದ ಎಲ್ಲಾ ಮಾ ನವೀಯ ಮೌಲ್ಯಗಳನ್ನು ನಿರಾಕರಿಸುವಂತಹ ಆಧುನಿಕ ಲೌಕಿಕ ಬದುಕಿಗೆ ಜಾರಿದರು. ತಂದೆ ತಾಯಂದಿರನ್ನು ಪೋಷಿಸಬೇಕಾದಂತಹ ಶಿಕ್ಷಣವೂ ಇಲ್ಲದಾಯಿತು.

ಅರ್ಹತೆಯುಳ್ಳವರು ಮಾತ್ರ ಬದುಕಬೇಕು ಎಂಬ ಚಾರ್ಲ್ಸ್ ಡಾರ್ವಿನ್‌ನ

ಸಿದ್ಧಾಂತಗಳನ್ನು ಒಪ್ಪಿಕೊಂಡಾಗಲೂ ಅಶಕ್ತರು ಬದುಕಲು ಅನರ್ಹರಾದರು. ಮನುಷ್ಯನ ಪೂರ್ವ ಕಾಲಘಟ್ಟಗಳಲ್ಲಿ ಇರುವುದೆಲ್ಲವೂ ಅವರ ತಂದೆ ತಾಯಂದಿರನ್ನು ಸಂರಕ್ಷಿಸುತ್ತಿಲ್ಲ ಎಂದಿರುವಾಗ ಮಾನುಷ್ಯ ಮಾತ್ರ ಯಾಕೆ ಕಷ್ಟಪಟ್ಟು ಹೀಗೆ ಮಾಡಬೇಕು.

ಧರ್ಮಾನುಯಾಯಿಗಳು ಕೂಡಾ ಅರಿತೋ ಅರಿಯದೆಯೋ ಆಧುನಿಕ ನಾಗರಿಕತೆಯ ಉತ್ಪಾದನೆಯಾದ ಭೋಗಾಸಕ್ತಿಯ ಪೂರ್ಣ ದಾಸನಾಗಿ ಮಾರ್ಪಟ್ಟಿದ್ದಾರೆ. ಇದು ಸಹಜವಾದ ವಾರ್ಧಕ್ಯದಿಂದ ಅಶಕ್ತರಾದ ಮಾತಾಪಿತರನ್ನು ನಿರ್ಲಕ್ಷಿಸಲು ಕಾರಣವಾಗಿದೆ.



# ಪವಿತ್ರ ಕುರ್‌ಆನಿನಲ್ಲಿ

ಮಾನವನಿಗೆ ಹೆಚ್ಚು ಜವಾಬ್ದಾರಿಕೆ ಯಾರ ಮೇಲಿದೆ? ಅವನನ್ನು ಸೃಷ್ಟಿಸಿ ಪರಿಪಾಲಿಸಿದ ಪ್ರಪಂಚದ ಸೃಷ್ಟಿಕರ್ತನಾದ ಅಲ್ಲಾಹನೊಂದಿಗೆ ಎಂಬುದು ನಿಸ್ಸಂಶಯ. ಅವನಲ್ಲವೇ ಮನುಷ್ಯನಿಗೆ ಎಲ್ಲವನ್ನೂ ನೀಡಿರುವುದು. ಆತನ ಬದುಕು, ಬದುಕಿನ ವಿವಿಧ ಘಟ್ಟಗಳು, ಉಸಿರಾಡಲು ಗಾಳಿ, ಕುಡಿಯಲು ನೀರು, ತಿನ್ನಲು ಆಹಾರ ಪದಾರ್ಥಗಳು, ವಾಸಿಸಲು ಮನೆ ಹೀಗೆ ಎಲ್ಲವನ್ನೂ ದೇವನು ಕರುಣಿಸಿದ್ದಾನೆ.

ಆದರೂ ಮನುಷ್ಯನ ಜನನ ಹಾಗೂ ಬೆಳವಣಿಗೆಯು ಆತನ ಮಾತಾಪಿತರಿಂದಾಗಿದೆ. ತಾಯಿಯಾದವಳು ಆತನನ್ನು ಗರ್ಭದಲ್ಲಿ ಹೊತ್ತು ಯಾತನೆ ಅನುಭವಿಸಿ ಜನ್ಮ ನೀಡಿದಳು, ಬಹಳ ಸಂಕಷ್ಟ, ನೋವು, ಯಾತನೆ ಅನುಭವಿಸಿ ಬೆಳೆಸಿದಳು. ಆತನ ತಂದೆಯು ಅವನನ್ನು ಪೋಷಿಸಿ ಶುಶ್ರೂಷೆ ಗೈದು, ಆತನಿಗೆ ಆಹಾರ ನೀಡಿ ಉಡುಗೆ ತೊಡುಗೆ ನೀಡಿ ಸಂರಕ್ಷಿಸಿದನು. ಆತನಿಗಾಗಿ ತಾನು ಸಂಪಾದಿಸಿದ್ದನ್ನು ವ್ಯಯಿಸಿ ಆತನಿಗೊಂದು ಜೀವನದ ಹಾದಿಯನ್ನು ತೋರಿಸಿದನು.

ಅತ್ತು ಕೂಗಿ ಕಾಲು ಹೊಡೆಯುವುದರ ಹೊರತು ಇನ್ನೇನೂ ಮಾಡಲಾಗದೆ ಜನಿಸಿ ಹೊರ ಬಿದ್ದ ಹಸುಳೆಯನ್ನು ಹತ್ತಿಪ್ಪತ್ತು ವಯಸ್ಸಿನ ವರೆಗೆ ಅಂದರೆ ಎರಡು ದಶಕಗಳ ಕಾಲ ದಣಿದು ತೀವ್ರ ಪರಿಶ್ರಮ ಪಟ್ಟು ಸಾಕಿ ಸಲಹಿರುವುದು ಆತನ ತಂದೆ ತಾಯಿಗಳಾಗಿದ್ದಾರೆ. ಅಲ್ಲಾಹನನ್ನು ಹೊರತು ಪಡಿಸಿದರೆ ತೀವ್ರ ಪರಿಶ್ರಮ ಪಟ್ಟು ಮನುಷ್ಯನನ್ನು ಬದುಕಲು ಯೋಗ್ಯನನ್ನಾಗಿ ಮಾಡಿರುವುದು ಆತನ ತಂದೆ ಮಾತಾಪಿತರಾಗಿದ್ದಾರೆ. ಆದಕ್ಕಾಗಿ ಓರ್ವ ಕವಿಯು 'ನಿಮಗರಿವಿದೆಯೇ ನೀವು ಹೇಗೆ ನೀವಾಗಿದ್ದೀರಿ' ಎಂದು ಹಾಡಿರುವುದು.

'ಹೂವಿಗೇನು ಗೊತ್ತು ಬೇರು ಅನುಭವಿಸುವ ಕಹಿಯಾತನೆ' ಎಂಬ ಪ್ರಶ್ನೆಯೂ ಪ್ರಸಕ್ತವಾಗಿದೆ. ಆದ್ದರಿಂದ ಅಲ್ಲಾಹನ ಬಳಿಕ ಮನುಷ್ಯನಿಗೆ ಅತಿ ಹೆಚ್ಚು ಜವಾಬ್ದಾರಿಕೆ,

ಉತ್ತರದಾಯಿತ್ವವು ಮಾತಾಪಿತರೊಂದಿಗೆ ಇರಬೇಕಾಗಿದೆ. ಅತಿ ಹೆಚ್ಚು ಗೌರವಾದರ, ಅನುಸರಣೆ ತೋರಬೇಕಾದುದು ಕೂಡಾ ಅವರೊಂದಿಗಾಗಿದೆ. ಒಳಿತು ಮತ್ತು ಕೃತಜ್ಞತೆ ತೋರಬೇಕಾದುದು ಕೂಡಾ ತಂದೆ ತಾಯಂದಿರಿಗಾಗಿದೆ. ಈ ವಿಚಾರವನ್ನು ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಜನರಿಗೆ ತಿಳಿಸಿದ್ದಾನೆ. ತಂದೆ ತಾಯಂದಿರ ಸಂರಕ್ಷಣೆಯ ಹೊಣೆಯು ಪ್ರಕೃತಿದತ್ತವಾಗಿದ್ದರೂ ಕುರ್‌ಆನ್ ಅದನ್ನು ಪ್ರಬಲವಾಗಿ ಆ ಜವಾಬ್ದಾರಿಕೆಯನ್ನು ನಿಭಾಯಿಸಬೇಕೆಂದು ಸಾರುತ್ತದೆ. ಇದು ಐದು ಹೊತ್ತಿನ ನಮಾಝ್ ಕಡ್ಡಾಯವಾಗುವುದಕ್ಕಿಂತ ಮೊದಲೇ ಹೇಳಿದೆ ಎಂಬುದು ಕೂಡಾ ಗಮನಾರ್ಹ.

"ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿರುತ್ತೇವೆ. ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ಗರ್ಭದಲ್ಲಿರಿಸಿದಳು. ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ಕಳೆದುವು. (ಆದುದರಿಂದಲೇ ನಾವು ಅವನೊಡನೆ) ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೇ ಮರಳಬೇಕಾಗಿದೆ. (ಎಂದು ಉಪದೇಶಿಸಿದೆವು.)" **(ಪವಿತ್ರ ಕುರ್‌ಆನ್: 31: 14)**

ಶೈಶವಾವಸ್ಥೆಯು ಮನುಷ್ಯನ ಅತ್ಯಂತ ದುರ್ಬಲ ಸ್ಥಿತಿಯಾಗಿದೆ. ಅತ್ತು ಕಾಲು ಬಡಿ ಯಲು ಮಾತ್ರ ಸಾಧ್ಯವಿರುವ ಕಾಲ. ನಂತರ ಸ್ವಲ್ಪ ಹೊರಳುತ್ತಾನೆ. ಬಳಿಕ ಮೊಣಕಾಲೂರು ತ್ತಾನೆ. ನಂತರ ಮೆಲ್ಲನೆ ನಿಲ್ಲಲು ಶ್ರಮಿಸುತ್ತಾನೆ. ಆಮೇಲೆ ಹೆಜ್ಜೆಯಿಡತೊಡಗುತ್ತಾನೆ. ಈ ಹಂತವು ಬದುಕಿನ ಅತ್ಯಂತ ಗಮನಾರ್ಹ ಘಟ್ಟವಾಗಿದೆ. ಪುಟ್ಟ ಮಗುವನ್ನು ಎಲ್ಲರೂ ಪ್ರೀತಿಸುತ್ತಾರೆ, ಲಾಲಿಸುತ್ತಾರೆ, ಸ್ನಾನ ಮಾಡಿಸುತ್ತಾರೆ, ಆಟವಾಡಿಸುತ್ತಾರೆ, ತಿನ್ನಿಸುವುದು ಕುಡಿಸುವುದು ಹೀಗೇ ಎಲ್ಲರೂ ಹೆಚ್ಚಾಗಿ ಈ ಅವಧಿಯಲ್ಲಿ ಗಮನಿಸಲ್ಪಡುತ್ತಾರೆ. ಅವರಿಗೆ ಕಾವಲಾಗಿರುತ್ತಾರೆ. ನಂತರದ ಬಾಲ್ಯವು ಅನುಗ್ರಹೀತವಾದ ಅವಧಿ ಯಾಗಿದೆ. ಇದು ನಗು, ತುಂಟಾಟದ ಕಾಲ. ಆಟವಾಡಲು ಬೇಕಾದ ಎಲ್ಲಾ ವಸ್ತು ಗಳನ್ನು ತಂದು ಕೊಡುತ್ತಾರೆ, ಕಲಿಸುತ್ತಾರೆ, ಕಲಿಯುತ್ತಾರೆ. ಸವಿಯಲು ಉತ್ತಮ ಆಹಾರ, ಧರಿಸಲು ಉತ್ತಮ ಉಡುಪು ಮತ್ತಿತರ ಸೌಲಭ್ಯಗಳನ್ನು ಒದಗಿಸುತ್ತಾರೆ. ಸ್ವಲ್ಪ ಪ್ರೌಢರಾದಾಗ ತಮ್ಮ ವಿಚಾರಗಳಲ್ಲಿ ತಾವೇ ನಿರ್ಧಾರ ಕೈಗೊಳ್ಳಲು ಪ್ರಯತ್ನಿಸುತ್ತಾರೆ. ಆಗ ತಂದೆ ತಾಯಂದಿರ ಸಂರಕ್ಷಣೆ ಲಭಿಸುತ್ತದೆ. ಸ್ವಾತಂತ್ರ್ಯದ ಜೊತೆಗೆ ಪ್ರೀತಿ ವಾತ್ಸಲ್ಯ, ಸಹಕಾರಗಳೂ ಲಭ್ಯವಾಗುತ್ತದೆ. ಆದರೆ ಯೌವನವೆಂಬುದು ಉತ್ಸಾಹ, ದೃಢತೆ, ಸ್ಥೈರ್ಯದಿಂದ ಕಾರ್ಯ ನಿರ್ವಹಿಸುವ ಕಾಲವಾಗಿದೆ. ಎಲ್ಲವನ್ನೂ ತಾನೇ ನಿರ್ಧರಿಸುವ ಕಾಲ. ಇದು ಬಯಕೆ ಗಳನ್ನು ಈಡೇರಿಸಲು ಸಾಧ್ಯವಾಗುವ

ಚೈತನ್ಯದ ರಕ್ತ ಕುದಿಯುವ ಪ್ರಾಯವಾಗಿದೆ.

ವಾರ್ಧಕ್ಯದೆಡೆಗೆ ಪ್ರವೇಶವಾಗುವುದರೊಂದಿಗೆ ಎಲ್ಲವೂ ಹಳಿ ತಪ್ಪುತ್ತದೆ. ರೋಗ, ನಿಶ್ಶಕ್ತಿ ಕಾಡಲಾರಂಭಿಸುತ್ತದೆ. ಎಲ್ಲಾ ವಿಚಾರಗಳ ಬಗ್ಗೆ ತಾನೇ ನಿರ್ಧರಿಸುತ್ತಿದ್ದ ಕಾಲ ಕಳೆದು ಈಗ ಪರರನ್ನು ಆಶ್ರಯಿಸಬೇಕಾಗುತ್ತದೆ. ಬಯಕೆಗಳನ್ನು ಈಡೇರಿಸಲಾಗದೆ ಕ್ರಮೇಣ ರೋಗಿಯಾಗಿ ತೀವ್ರ ಹತಾಶ ಸ್ಥಿತಿಗೆ ತಲುಪುತ್ತಾನೆ. ಯಾವುದೇ ಕೆಲಸವನ್ನೂ ಮಾಡಲು ಸಾಧ್ಯವಾಗದೆ ರೋಗ ಮತ್ತ ಔಷಧಿಯ ದಾಸನಾಗುತ್ತಾನೆ. ವರಮಾನ ಏನೂ ಇಲ್ಲದೆ ಕೇವಲ ಖರ್ಚು ವೆಚ್ಚದ ಸ್ಥಿತಿಗೆ ತಲುಪುತ್ತಾನೆ. ಇದರಿಂದ ಅಧಿಕಾರವೂ ನಷ್ಟವಾಗುವುದು. ಹೆಚ್ಚಿನವರು ಹೆಚ್ಚಿನ ಸಂದರ್ಭಗಳಲ್ಲಿ ನಿರ್ಲಕ್ಷ್ಯಕ್ಕೊಳಗಾಗುತ್ತಾರೆ. ಇದರಿಂದಾಗಿ ನಾನು ನಿಷ್ಪ್ರಯೋಜಕವೆಂಬ ಭಾವನೆ ಬಂದು ವಾರ್ಧಕ್ಯದಲ್ಲಿ ಹತಾಶೆ ಅನುಭವಿಸುತ್ತಾನೆ. ಅದು ದಿನಗಳೆದಂತೆ ವರ್ಧಿಸುತ್ತಾ ಹೋಗುತ್ತದೆ. ಎಲ್ಲರಿಗೂ ನಾನು ಭಾರವಾಗಿದ್ದೇನೆ ಎಂಬ ಚಿಂತೆ ತೀವ್ರ ಮಾನಸಿಕ ಸಂಘರ್ಷಕ್ಕೆ ಎಡೆಮಾಡಿ ಕೊಡುತ್ತದೆ. ಆದ್ದರಿಂದ ಬದುಕಿನಲ್ಲಿ ವಾರ್ಧಕ್ಯವೆಂಬುದು ತೀವ್ರವಾದ ಸಂಕಷ್ಟದ ಕಾಲ. ಸಮಾಜವು ಮುದಿಯರನ್ನು ಹಳೆಯ ಗುಜರಿ ವಸ್ತುಗಳಂತೆ ನೋಡುತ್ತದೆ... ಸಮಾಜದಲ್ಲಿ ಅವರು ಎಲ್ಲಾ ಅರ್ಥದಲ್ಲಿಯೂ ಏಕಾಂಗಿಯಾಗುತ್ತಾರೆ. ಹಾಗೆಯೇ ಮನುಷ್ಯನು ನಿಷ್ಪ್ರಯೋಜಕ ನೆನಿಸಿ, ಮಕ್ಕಳಿಗೆ ಸಿಗುವಷ್ಟು ಮಹತ್ವ ಕೂಡಾ ಸಿಗದ ಸ್ಥಿತಿಗೆ ತಲುಪುತ್ತಾನೆ. ಈ ವಾರ್ಧಕ್ಯದ ಸ್ಥಿತಿಯನ್ನು ಕುರ್‌ಆನ್ ಹೀಗೆ ವಿವರಿಸುತ್ತದೆ, "ಮತ್ತೂ ನೋಡಿರಿ. ಅಲ್ಲಾಹನು ನಿಮ್ಮನ್ನು ಸೃಷ್ಟಿಸಿದನು. ಆ ಮೇಲೆ ಅವನು ನಿಮಗೆ ಮರಣವನ್ನೀಯುತ್ತಾನೆ. ಮತ್ತು ನಿಮ್ಮಲ್ಲಿ ಕೆಲವರು ಎಲ್ಲವನ್ನೂ ತಿಳಿದ ಬಳಿಕವೂ ಏನೂ ತಿಳಿಯದವರಾಗುವಂತೆ ಅತಿ ವೃದ್ಧಾಪ್ಯಕ್ಕೆ ತಲುಪಿಸಲ್ಪಡುತ್ತಾರೆ. ವಾಸ್ತವದಲ್ಲಿ ಅಲ್ಲಾಹನು ಸರ್ವಜ್ಞನೂ ಸರ್ವಶಕ್ತನೂ ಆಗಿರುತ್ತಾನೆ." **(ಪವಿತ್ರ ಕುರ್‌ಆನ್: 16: 70)**

"ನಿಮ್ಮ ಪ್ರಭು(ಹೀಗೆ) ವಿಧಿಸಿಬಿಟ್ಟಿದ್ದಾನೆ. ನೀವು ಕೇವಲ ಅವನೊಬ್ಬನ ಹೊರತು ಇನ್ನಾರ ದಾಸ್ಯ ಆರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ ಅವರ ಬಗ್ಗೆ ಚಕಾರವೆತ್ತಬೇಡಿರಿ. ಮತ್ತು ಅವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ವಕವಾಗಿ ಮಾತನಾಡಿರಿ." **(ಪವಿತ್ರ ಕುರ್‌ಆನ್: 17: 23)**

ಇಸ್ಲಾಮಿನಲ್ಲಿ ನಮಾಝ್ ಅತ್ಯಂತ ಮಹತ್ತರವಾದ ಆರಾಧನಾ ಕರ್ಮವಾಗಿದೆ. ಅದರಲ್ಲಿ ಸುಜೂದ್ (ಸಾಷ್ಟಾಂಗ) ಅತ್ಯಂತ ಶ್ರೇಷ್ಠವಾದುದಾಗಿದೆ. ಅದರಲ್ಲಿ ಹೇಳುವ ಪ್ರಾರ್ಥನೆಯೂ ಕುರ್‌ಆನಿನಲ್ಲಿ ಬಂದಿಲ್ಲ, ಆದರೆ ಮಾತಾಪಿತರಿಗಾಗಿ ಮಾಡಬೇಕಾದ

ಪ್ರಾರ್ಥನೆ ಕುರ್‌ಆನಿನಲ್ಲಿದೆ. ಜೊತೆಗೆ ಅದನ್ನು ನಿರ್ವಹಿಸಲೇಬೇಕಾದ ತಾಕೀತನ್ನೂ ನೀಡಿದೆ, "ನಯ ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. 'ಓ ನನ್ನ ಪ್ರಭೂ! ಇವರು ನನ್ನ ಚಿಕ್ಕಂದಿನಲ್ಲಿ ದಯಾ ವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಇವರ ಮೇಲೆ ಕೃಪೆ ತೋರು' ಎಂದು ಪ್ರಾರ್ಥಿಸಿರಿ."

(ಪವಿತ್ರ ಕುರ್‌ಆನ್: 17: 24)

ಎಂತಹ ಸ್ಥಿತಿಯಲ್ಲಿಯೂ ಮಾತಾಪಿತರೊಂದಿಗೆ ಕೆಟ್ಟದ್ದಾಗಿ ವರ್ತಿಸಬಾರದು. ಅವರನ್ನು ನಿರ್ಲಕ್ಷಿಸದಿರಿ. ಅವರ ಜೊತೆ ಪ್ರೀತಿ ವಾತ್ಸಲ್ಯದಿಂದ ವರ್ತಿಸಿರಿ. ಸಾಧ್ಯವಾದಷ್ಟು ಸಹಕಾರ ನೀಡಿರಿ. ಉತ್ತಮ ರೀತಿಯಲ್ಲಿ ಸಂರಕ್ಷಿಸಿರಿ. ಅವರು ನಿಮ್ಮೊಂದಿಗೆ ಕೆಟ್ಟದ್ದಾಗಿ ವರ್ತಿಸಿದರೂ ನೀವು ಅವರೊಂದಿಗೆ ಕೆಟ್ಟದ್ದಾಗಿ ವರ್ತಿಸದಿರಿ. ಅವರ ಮನ ನೋಯಿಸುವಂತಹ ಯಾವುದೇ ಕೆಲಸ ಮಾಡಬೇಡಿರಿ. ಅಸಹನೆಯ ನೋಟವನ್ನೂ ಬೀರದಿರಿ. ಮಾತಾ ಪಿತರು ಕೋಪಗೊಳ್ಳುವಂತಹ, ಅವರ ಸ್ವಾಭಿಮಾನಕ್ಕೆ ಧಕ್ಕೆ ತರುವಂತಹ ಯಾವುದೇ ರೀತಿಯ ಕಾರ್ಯವು ಮಕ್ಕಳಿಂದ ಆಗಲೇ ಬಾರದು. ನನ್ನಿಂದಾಗಿ ನನ್ನ ಮಾತಾಪಿತರ ಕಣ್ಣು ಹನಿಗೂಡಬಾರದು, ಹೃದಯವು ನೋಯದಿರಲಿ ಎಂಬ ಬಗ್ಗೆ ಮಕ್ಕಳು ಎಚ್ಚರದಿಂದ ಇರಬೇಕು. ಯಾವುದೇ ಕಾರಣಕ್ಕೂ ಅವರ ಮಾತನ್ನು ಮೀರಬೇಡಿರಿ. ಮಾತಾಪಿತರ ಮಾತುಗಳನ್ನು ಧಿಕ್ಕರಿಸಲು ಅನುಮತಿಸಿದ ಏಕೈಕ ಕಾರ್ಯ ಬಹುದೇವಾರಾದನೆ ಮಾತ್ರವಾಗಿದೆ.

ಮಹಾಪಾಪವಾದ ಬಹುದೇವಾರಾಧನೆ ಮಾಡಲು, ಅದನ್ನು ಅನುಷ್ಠಾನಿಸಲು ಮಾತಾಪಿತರು ಉಪದೇಶಿಸಿದರೆ, ಪ್ರೇರೇಪಿಸಿದರೆ, ಮಾತ್ರವಲ್ಲ ಅದಕ್ಕೆ ಒತ್ತಡವನ್ನೂ ಹೇರಿದರೆ ಮಾತ್ರ ಅದನ್ನು ಧಿಕ್ಕರಿಸಿರಿ. ಆ ಕಾರ್ಯದಲ್ಲಿ ಮಾತ್ರ ಅವರ ಮಾತನ್ನು ತಿರಸ್ಕರಿಸಿರಿ. ಆಗಲೂ ಇತರೆಲ್ಲಾ ವಿಚಾರಗಳಲ್ಲಿ ಅವರೊಂದಿಗೆ ಉತ್ತಮವಾಗಿಯೇ ವರ್ತಿಸಬೇಕು.

"ಆದರೆ ಅವರು ನಿನಗೆ ತಿಳಿಯದುದನ್ನು ನನ್ನೊಂದಿಗೆ ಸಹಭಾಗಿಯಾಗಿ ಮಾಡ ಬೇಕೆಂದು ನಿನ್ನ ಮೇಲೆ ಒತ್ತಡ ಹಾಕಿದರೆ ಅವರ ಮಾತನ್ನು ಎಷ್ಟು ಮಾತ್ರಕ್ಕೂ ಕೇಳ ಬೇಡ. ಈ ಲೋಕದಲ್ಲಿ ಅವರೊಂದಿಗೆ ಸದ್ವರ್ತನೆ ತೋರುತ್ತಿರು. ಆದರೆ ಯಾರು ನನ್ನ ಕಡೆಗೆ ಒಲಿದಿರುವನೋ ಅವನ ಮಾರ್ಗವನ್ನು ಮಾತ್ರ ಅನುಸರಿಸು. ಮುಂದೆ ನಿಮ ಗೆಲ್ಲರಿಗೂ ನನ್ನ ಕಡೆಗೇ ಮರಳಲಿಕ್ಕಿದೆ. ಆಗ ನೀವು ಯಾವ ತರದ ಕರ್ಮಗಳನ್ನು ಮಾಡುತ್ತಿದ್ದಿರೆಂದು ನಾನು ನಿಮಗೆ ತೋರಿಸುವೆನು." (ಪವಿತ್ರ ಕುರ್‌ಆನ್: 31: 15)

“ತನ್ನ ಮಾತಾ ಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಉಪದೇಶಿಸಿದೆವು. ಆದರೆ (ನನ್ನ ಸಹಭಾಗಿಯೆಂದು) ನೀನು ಅರಿಯದಿರುವ ಯಾವುದಾದರೊಂದನ್ನು (ಆರಾಧ್ಯನನ್ನು) ನನ್ನ ಸಹಭಾಗಿಯನ್ನಾಗಿ ಮಾಡಬೇಕೆಂದು ಅವರು ನಿನ್ನ ಮೇಲೆ ಒತ್ತಡ ಹಾಕಿದರೆ ಅವರನ್ನು ಅನುಸರಿಸಬೇಡ. ನೀವೆಲ್ಲರೂ ನನ್ನ ಕಡೆಗೇ ಮರಳಿ ಬರಬೇಕಾಗಿದೆ. ಈಗ ನೀವು ಏನು ಮಾಡುತ್ತಿದ್ದೀರಿ ಎಂಬುದನ್ನು ನಾನು ನಿಮಗೆ ತೋರಿಸಿಕೊಡುವೆನು.” **(ಪವಿತ್ರ ಕುರ್‌ಆನ್: 29: 8)**

ತಂದೆ ತಾಯಂದಿರ ಜೊತೆಗಿರುವ ಕರ್ತವ್ಯ ಜವಾಬ್ದಾರಿಕೆ ಬಹಳ ಮಹತ್ತರವಾದುದು. ಆದ್ದರಿಂದಲೇ ಪವಿತ್ರ ಕುರ್‌ಆನ್ ಆ ಕುರಿತು ಆಗಾಗ ಎಚ್ಚರಿಸಿದೆ:

“ಅಲ್ಲಾಹನ ಹೊರತು ಬೇರೆ ಯಾರ ದಾಸ್ಯ ಆರಾಧನೆಯನ್ನೂ ಮಾಡಬಾರದೆಂದೂ ಮಾತಾಪಿತರು ಬಂಧು ಬಳಗದವರು ಅನಾಥರು ಮತ್ತು ನಿರ್ಗತಿಕರೊಂದಿಗೆ ಸೌಜನ್ಯ ದಿಂದ ವರ್ತಿಸಬೇಕೆಂದೂ ಜನರೊಡನೆ ಒಳ್ಳೆಯ ಮಾತುಗಳನ್ನಾಡಬೇಕೆಂದೂ ನಮಾಝ್ ಸಂಸ್ಥಾಪಿಸಬೇಕೆಂದೂ ಝಕಾತ್ (ಕಡ್ಡಾಯ ದಾನ) ಕೊಡಬೇಕೆಂದೂ ನಾವು ಇಸ್ರಾಈಲ್ ಸಂತತಿಯವರಿಂದ ಬಲವಾದ ಕರಾರನ್ನು ಪಡೆದ ಆ ಸಂದರ್ಭವನ್ನು ಸ್ಮರಿಸಿರಿ.” **(ಪವಿತ್ರ ಕುರ್‌ಆನ್: 2: 83)**

ಪವಿತ್ರ ಕುರ್‌ಆನ್‌ನಲ್ಲಿ ತಂದೆ ತಾಯಂದಿರ ವಿಚಾರ ಹೇಳಿದ ಮೂರು ಕಡೆಗಳಲ್ಲಿಯೂ ತೌಹೀದ್ ಜೊತೆ ಸಂಯೋಜಿಸಿಕೊಂಡೇ ವಿವರಿಸಿದೆ. ಅಂದರೆ ಮಾತಾಪಿತರ ಸಂರಕ್ಷಣೆಯು ತೌಹೀದ್‌ನ ಅವಿಭಾಜ್ಯ ಘಟಕವಾಗಿದೆ ಎಂದರ್ಥ. ಪವಿತ್ರ ಕುರ್‌ಆನ್ ಮಾತಾಪಿತರ ವಿಚಾರ ಹೇಳುವಾಗ ಮಾತೆಗೆ ಹೆಚ್ಚಿನ ಮಹತ್ವ ನೀಡುತ್ತಿದೆ. ಅವರು ಅನುಭವಿಸಿದ ನೋವು ಯಾತನೆಗಳನ್ನು ಅದು ಪ್ರಸ್ತಾಪಿಸುತ್ತದೆ. ಬಳಿಕ ಸನ್ಮನಸ್ಸಿನ ಸಚ್ಚಾರಿತ್ರ್ಯವಂತರ ಗುಣವಿಶೇಷತೆಗಳನ್ನು ಹೀಗೆ ವಿವರಿಸುತ್ತದೆ:

“ತನ್ನ ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಆದೇಶಿಸಿದೆವು. ಅವನ ತಾಯಿಯು ಅವನನ್ನು ಬಹಳ ಕಷ್ಟಪಟ್ಟು ಗರ್ಭದಲ್ಲಿರಿಸಿದಳು. ಮತ್ತು ಕಷ್ಟಪಟ್ಟೇ ಹೆತ್ತಳು. ಅವನ ಗರ್ಭಾವಧಿಯಲ್ಲಿ ಮತು ಎದೆಹಾಲು ಬಿಡಿಸುವುದರಲ್ಲಿ ಮೂವತ್ತು ತಿಂಗಳುಗಳು ತಗಲಿದವು. ಅವನು ಸಂಪೂರ್ಣ ಪ್ರಾಬಲ್ಯಕ್ಕೆ ಬಂದು ನಲುವತ್ತು ವರ್ಷದವನಾದಾಗ ‘ನನ್ನ ಪ್ರಭೂ, ನೀನು ನನಗೂ ನನ್ನ ಮಾತಾಪಿತರಿಗೂ ಕರುಣಿಸಿರುವ ಅನುಗ್ರಹಗಳ ಬಗ್ಗೆ ಕೃತಜ್ಞತೆ ಸಲ್ಲಿಸುವ ಹಾಗೂ ನೀನು ಸಂತೃಪ್ತನಾಗು ವಂತಹ ಸತ್ಕರ್ಮಗಳನ್ನು ಮಾಡುವ ಸೌಭಾಗ್ಯವನ್ನು ನನಗೆ ನೀಡು

ಮತ್ತು ನನ್ನ ಮಕ್ಕಳನ್ನೂ ಸಜ್ಜನರಾಗಿ ಮಾಡಿ ನನಗೆ ಸುಖ ನೀಡು, ನಾನು ನಿನ್ನ ಸನ್ನಿಧಿಯಲ್ಲಿ ಪಶ್ಚಾತ್ತಾಪ ಪಡುತ್ತೇನೆ ಮತ್ತು 'ಖಂಡಿತವಾಗಿಯೂ ನಾನು ಶರಣಾಗತ (ಮುಸ್ಲಿಮ್) ದಾಸರಲ್ಲಾಗಿರುತ್ತೇನೆ' ಎಂದರು." **(ಪವಿತ್ರ ಕುರ್‌ಆನ್: 46: 15)**

ಸ್ವತಃ ತಮ್ಮ ತಂದೆ ತಾಯಂದಿರ ಜತೆ ನಮ್ಮ ಮಾತಾಪಿತರು ಯಾವ ರೀತಿಯ ವರ್ತನೆ ತೋರುತ್ತಿದ್ದಾರೆ ಎಂಬ ಬಗ್ಗೆ ಅವರ ಮಕ್ಕಳು ನೋಡುತ್ತಿರುತ್ತಾರೆ. ಅದನ್ನವರು ವೀಕ್ಷಿಸಿ ಅರಿತುಕೊಳ್ಳುವರು. ಸಹಜವಾಗಿ ಅವರು ಅದನ್ನು ಮನದಲ್ಲಿರಿಸುವರು. ಅದು ಅವರ ಮೇಲೆ ಭಾರಿ ಪ್ರಭಾವ ಬೀರುತ್ತಿರುತ್ತದೆ. ಅವರು ಬೆಳೆದು ಯುವಕರಾಗಿ ಪ್ರಬುದ್ಧರಾದ ಬಳಿಕ ತಂದೆ ತಾಯಂದಿರು ವೃದ್ಧಾಪ್ಯ ಸ್ಥಿತಿಗೆ ತಲುಪಿದಾಗ ಇತಿಹಾಸದ ಪುನರಾವರ್ತನೆಯಾಗುತ್ತದೆ. ಅವರು ತಮ್ಮ ತಂದೆ ತಾಯಂದಿರನ್ನು ನಿರ್ಲಕ್ಷಿಸಿದ್ದರೆ ಅವರೂ ತಮ್ಮ ಮಕ್ಕಳಿಂದ ನಿರ್ಲಕ್ಷಿಸಲ್ಪಡುವರು. ಅವರನ್ನೂ ಮನೆಯಿಂದ ಹೊರದಬ್ಬ ಲಾಗುವುದು. ಆಗ ಅವರು ಮಾಡಿದ್ದುದಕ್ಕಿಂತ ಪ್ರಬಲವಾದ ತಿರುಗೇಟು ಲಭಿಸುವುದು. ಮಾತಾಪಿತರ ಜೊತೆ ತೋರಿದ ದುರ್ವರ್ತನೆ, ದೌರ್ಜನ್ಯಗಳಿಗೆ ಎಷ್ಟೋ ಪಟ್ಟು ಅಧಿಕ ತಮ್ಮ ಮಕ್ಕಳಿಂದ ಮರಳಿ ಪಡೆಯಬೇಕಾಗುವುದು. ಸಾವಿರಾರು ಕನ್ನಡಿಯಿರುವ ಮನೆಗೆ ಎರಡು ನಾಯಿಗಳು ಪ್ರವೇಶಿಸಿದಂತಹ ಸ್ಥಿತಿಯು ಲಭ್ಯವಾಗುವುದು. ಒಂದು ನಾಯಿ ಬಾಲ ಅಲ್ಲಾಡಿಸಿದರೆ ಸಾವಿರಾರು ನಾಯಿಗಳು ಬಾಲ ಅಲ್ಲಾಡಿಸಿದಂತಾಗುವುದು. ಮತ್ತೊಂದು ನಾಯಿ ಅದರ ವಿರುದ್ಧ ಬೊಗಳಿದರೆ ಸಾವಿರಾರು ನಾಯಿಗಳು ಬೊಗಳಿದಂತಾಗುತ್ತದೆ. ಆಗ ಅದಕ್ಕೆ ಹೆದರಿ ಓಡಿ ಹೋಗ ಬೇಕಾಗುತ್ತದೆ. ತಂದೆ ತಾಯಂದಿರನ್ನು ನಿರ್ಲಕ್ಷಿಸುವ ಮಕ್ಕಳು ಅವರ ಸ್ಥಿತಿಗೆ ತಲುಪಿದಾಗ ಆ ನಾಯಿಗಳಂತೆ ವೃದ್ಧಾಶ್ರಮಗಳಿಗೆ ಸೇರ ಬೇಕಾಗುವುದು.



# ಪ್ರವಾದಿ ಚರ್ಯೆಯಲ್ಲಿ ಮಾತಾಪಿತರು

ಮಾತಾಪಿತರ ಜೊತೆಗಿನ ವರ್ತನೆಯು ಮಾನವ ಬದುಕಿನ ಸೋಲು-ಗೆಲುವು ಗಳನ್ನು ನಿಶ್ಚಯಿಸುತ್ತದೆ. ಮಾತಾಪಿತರ ಜೊತೆ ನೀನು ಯಾವ ರೀತಿಯಲ್ಲಿ ವರ್ತಿಸಿದ್ದಿ ಎಂಬುದನ್ನು ಆಧರಿಸಿ ಸ್ವರ್ಗ ನರಕಗಳ ನಿರ್ಧಾರವಾಗುತ್ತದೆಂದು ಪ್ರವಾದಿ ವರ್ಯರು(ಸ) ಹಲವು ಬಾರಿ ಹೇಳಿ ಕೊಟ್ಟಿದ್ದಾರೆ.

ಅಲ್ಲಾಹನ ಪ್ರವಾದಿ ಮುಹಮ್ಮದ್(ಸ) ಹೇಳಿರುವುದಾಗಿ ಇಬ್ನ್ ಅಬ್ಬಾಸ್ ವರದಿ ಮಾಡಿರುವರು: ಅಲ್ಲಾಹನ ಸಂಪ್ರೀತಿ ಬಯಸಿ ಯಾರಾದರೂ ತಮ್ಮ ತಂದೆ ತಾಯಂದಿರಿಗೆ ಒಳಿತು ಮಾಡಲು ಮತ್ತು ಅವರ ಸೇವೆಗೈಯಲು ಸಮಯ ವ್ಯಯಿಸಿದರೆ ಸ್ವರ್ಗದ ಎರಡು ಬಾಗಿಲುಗಳು ತೆರೆಯಲ್ಪಡುವುದು. ತಂದೆ ತಾಯಂದಿರನ್ನು ಎದುರಿಸಲು ಅವರನ್ನು ಧಿಕ್ಕರಿಸಲು ಮುಂದಾದರೆ ನರಕದ ಎರಡು ಬಾಗಿಲುಗಳು ಅವನಿಗಾಗಿ ತೆರೆಯಲ್ಪಡುವುದು. ಆಗ ಪ್ರವಾದಿ ಶಿಷ್ಯಂದಿರಲ್ಲಿ ಓರ್ವರು ಕೇಳಿದರು: ತಂದೆ ತಾಯಂದಿರು ಕ್ರೂರಿಗಳಾಗಿದ್ದರೆ? ಆಗ ಪ್ರವಾದಿವರ್ಯರು: ಅವರು ನಿನ್ನೊಂದಿಗೆ ಕ್ರೂರವಾಗಿ ವರ್ತಿಸಿದರೂ ಸರಿ, ನೀನು ಅವರೊಂದಿಗೆ 'ಛೇ' ಎನ್ನುವ ಮಾತನ್ನೂ ಉಚ್ಚರಿಸಬಾರದು ಎಂದು ಹೇಳಿದರು. ಒಮ್ಮೆ ಸಹಾಬಿಗಳ ಪೈಕಿ ಓರ್ವರು ಪ್ರವಾದಿವರ್ಯರೊಂದಿಗೆ: ತಂದೆ ತಾಯಂದಿರ ಕಾರಣದಿಂದ ಮಕ್ಕಳಿಗೆ ಸಿಗುವ ಅನುಗ್ರಹಗಳು ಯಾವುದೆಂದು ಕೇಳಿದರು. ಆಗ ಪ್ರವಾದಿವರ್ಯರು(ಸ) ಹೇಳಿದರು: ಅವರು ನಿಮ್ಮ ಸ್ವರ್ಗದ ದ್ವಾರವಾಗಿದ್ದಾರೆ. ನರಕದ ದ್ವಾರವೂ ಆಗಿದ್ದಾರೆ. ಅವರ ಅಭಿರುಚಿಗನುಸಾರವಾಗಿ ಅವರ ಸೇವೆಗೈದರೆ ಸ್ವರ್ಗ ಲಭಿಸುವುದು. ಕ್ರೂರವಾಗಿ ವರ್ತಿಸಿದರೆ ನರಕವೂ ದೊರೆಯುವುದು.

ಮತ್ತೊಮ್ಮೆ ಪ್ರವಾದಿವರ್ಯರು(ಸ) ಹೇಳಿದರು: ಅಲ್ಲಾಹನ ಪ್ರೀತಿ ತಂದೆ ತಾಯಂದಿರ ಪ್ರೀತಿಯಲ್ಲಿದೆ. ಅಲ್ಲಾಹನ ಕೋಪವೂ ತಂದೆ ತಾಯಂದಿರ ಕೋಪದಲ್ಲಿದೆ.

**(ಹಾಕಿಮ್)**

ಪ್ರವಾದಿವರ್ಯರು(ಸ) ತನ್ನ ಅನುಯಾಯಿಗಳ ಜೊತೆ ಹೀಗೆ ಪ್ರಸ್ತಾಪಿಸಿದರು. ಸ್ವರ್ಗದೊಳಗೆ ಪ್ರವೇಶಿಸಲು ಹಲವು ಬಾಗಿಲುಗಳಿವೆ. ಭೂಮಿಯಲ್ಲಿ ಮಾಡಿದ ಸತ್ಕರ್ಮಗಳಿಗೆ ಅನುಸಾರವಾಗಿ ಓರ್ವರಿಗೆ ಅದರಲ್ಲಿ ಪ್ರವೇಶಿಸಬಹುದು. ಸ್ವರ್ಗದ ಮುಖ್ಯ ಬಾಗಿಲು ತಾಯಿಯ ಜೊತೆಗಿನ ವರ್ತನೆಗೆ ಸಂಬಂಧಿಸಿದ್ದಾಗಿದೆ. ನೀನು ಅದರಲ್ಲಿ ಪ್ರವೇಶಿಸಲು ಬಯಸುತ್ತೀ ಎಂದಾದರೆ ಅದನ್ನು ಭದ್ರಪಡಿಸಿರಿ. ಇಲ್ಲದಿದ್ದಲ್ಲಿ ಅದರೊಳಗೆ ಪ್ರವೇಶ ಅಸಾಧ್ಯ. ಎರಡೂ ನಿನ್ನ ವಿಧಿಯ ಅನುಸಾರ ಸಿಗಲಿದೆ.

ತಂದೆ ತಾಯಂದಿರ ಸೇವೆಯ ಕುರಿತು ಕೇಳಲಾದಾಗ ಪ್ರವಾದಿಯವರು(ಸ) ಹೀಗೆ ಹೇಳಿದರು: ಅವರೇ ನಿನ್ನ ಸ್ವರ್ಗ ಮತ್ತು ನರಕವಾಗಿದ್ದಾರೆ. (ಇಬ್ನು ಮಾಜ)

ಅಂದರೆ ತಂದೆ ತಾಯಂದಿರು ಸ್ವರ್ಗ ಲಭಿಸುವ ಮಾರ್ಗವಾಗಿದ್ದಾರೆ. ಆದ್ದರಿಂದ ನಿನಗೆ ಸ್ವರ್ಗ ಪಡೆಯುವ ವ್ಯಾಮೋಹವಿದ್ದರೆ ಬದುಕಲ್ಲಿ ಮಾತಾಪಿತರ ಜೊತೆ ಉತ್ತಮವಾಗಿ ವರ್ತಿಸು.

ಆದರೂ ಪ್ರವಾದಿವರ್ಯರು(ಸ) ತಂದೆಗಿಂತ ಹೆಚ್ಚು ಪ್ರಾಧಾನ್ಯತೆಯನ್ನು ತಾಯಿಗೆ ನೀಡಿದ್ದಾರೆ. ಅಬೂ ಹುರೈರಾ(ರ)ರಿಂದ ವರದಿಯಾಗಿದೆ. ಓರ್ವರು ಪ್ರವಾದಿ ವರ್ಯರ(ಸ) ಬಳಿ ಬಂದು ಕೇಳಿದರು: ಅಲ್ಲಾಹನ ಪ್ರವಾದಿಗಳೇ ನಾನು ಅತ್ಯಂತ ಹೆಚ್ಚು ಸೇವೆಗೈಯಲು ಯಾರು ಅರ್ಹರು? ಆಗ ಪ್ರವಾದಿ ವರ್ಯರು(ಸ): ನಿನ್ನ ತಾಯಿ ಎಂದು ಹೇಳಿದರು. ನಂತರ ಯಾರು ಎಂದು ಕೇಳಿದಾಗ ನಿನ್ನ ತಾಯಿ ಎಂದು ಹೇಳಿದರು. ನಂತರ ಯಾರು ಎಂದು ಕೇಳಿದಾಗಲೂ ನಿನ್ನ ತಾಯಿ ಎಂದೇ ಉತ್ತರಿಸಿದರು. ನಂತರ ಯಾರು ಎಂದು ಕೇಳಿದಾಗ ನಿನ್ನ ತಂದೆ ಎಂದು ಉತ್ತರಿಸಿದರು.

ಮತ್ತೊಂದು ವರದಿಯ ಪ್ರಕಾರ ಹೀಗಿದೆ: ಅಲ್ಲಾಹನ ಪ್ರವಾದಿಗಳೇ, ಅತ್ಯಂತ ಶ್ರೇಷ್ಠ ರೀತಿಯಲ್ಲಿ ಉತ್ತಮವಾಗಿ ವರ್ತಿಸಲು ಅರ್ಹರು ಯಾರು ಎಂದು ಕೇಳಲಾ ದಾಗ, ಪ್ರವಾದಿವರ್ಯರು(ಸ) ಹೀಗೆ ಹೇಳಿದರು: ನಿನ್ನ ತಾಯಿ ನಂತರ ನಿನ್ನ ತಾಯಿ ನಂತರವೂ ನಿನ್ನ ತಾಯಿ ಎಂದರು. ಆನಂತರ ನಿನ್ನ ತಂದೆ ಎಂದರು. ಆಮೇಲೆ ನಿನ್ನ ಆಪ್ತ ಸಂಬಂಧಿಕರು ಎಂದು ಹೇಳಿದರು.

ಅದರ ಜೊತೆಗೆ ತಂದೆಯ ಬಗ್ಗೆಯ ವಿಶೇಷವಾಗಿ ಒತ್ತಿ ಹೇಳಿದ್ದಾರೆ. ಪ್ರವಾದಿ ವರ್ಯರು(ಸ) ಹೇಳಿದರು: ನಿನಗೆ ನಿನ್ನ ತಂದೆಯ ಮೇಲಿರುವ ಪ್ರೀತಿಯನ್ನು ಸುರಕ್ಷಿತವಾಗಿರಿಸು. ಅದನ್ನು ಕಡಿದು ಹಾಕದಿರು. ಹಾಗೊಂದು ವೇಳೆ ಮಾಡಿದರೆ ಅಲ್ಲಾಹನು ನಿನ್ನ ಪ್ರಕಾಶವನ್ನೇ ನಂದಿಸುವನು.

ಒಳಿತುಗಳಲ್ಲಿ ಅತ್ಯಂತ ಶ್ರೇಷ್ಠವಾದ ಒಳಿತು ತನ್ನ ತಂದೆಯ ಜೊತೆಗಿರುವ ಸಂಬಂಧವನ್ನು ಸುದೃಢಗೊಳಿಸುವುದಾಗಿದೆ.

## ನರಕದೆಡೆಗೆ ಇರುವ ಹಾದಿ

ತಂದೆ ತಾಯಂದಿರೊಂದಿಗೆ ಕೆಟ್ಟದ್ದಾಗಿ ವರ್ತಿಸಿದರೆ ಅದು ಇಹಪರದಲ್ಲಿಯೂ ಶಿಕ್ಷೆಗೆ ಕಾರಣವಾಗುತ್ತದೆ. ಅಂದರೆ ಇಹಲೋಕದಲ್ಲಿ ಸಣ್ಣ ಶಿಕ್ಷೆ ಮತ್ತು ಪರಲೋಕದಲ್ಲಿ ಕಠಿಣ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಪರಲೋಕದ ಶಿಕ್ಷೆಯ ಕುರಿತು ಮಾತ್ರವಲ್ಲ, ಐಹಿಕ ಬದುಕಿನ ಶಿಕ್ಷೆಯ ಕುರಿತೂ ಪ್ರವಾದಿವರ್ಯರು(ಸ) ಎಚ್ಚರಿಸಿದ್ದಾರೆ. ಪ್ರವಾದಿ(ಸ) ಹೇಳಿರುತ್ತಾರೆ: ಅಲ್ಲಾಹನು ಬಯಸಿದರೆ ಕೆಟ್ಟ ಕೃತ್ಯಗಳ ಕುರಿತು ಶಿಕ್ಷೆಗಳನ್ನು ನೀಡಲು ಅಂತ್ಯ ದಿನಗಳ ವರೆಗೆ ಕಾಯಬಹುದು. ಆದರೆ ಮಾತಾಪಿತರ ಜೊತೆ ಕೆಟ್ಟ ರೀತಿಯಲ್ಲಿ ವರ್ತಿಸುವವರಿಗೆ ಇಹಲೋಕದಲ್ಲಿಯೇ ಅತ್ಯಂತ ವೇದನಾಜನಕ ಶಿಕ್ಷೆ ನೀಡುವನು.

ಅಬ್ದುಲ್ಲಾ ಬಿನ್ ಉಮರ್(ರ)ರಿಂದ ವರದಿ. ಬಹಳ ಸಮಯ ನಿಷ್ಠೆಯಿಂದ ನಮಾಝ್ ನಿರ್ವಹಿಸುವ ಉಪವಾಸ ಆಚರಿಸುವ, ಝಕಾತ್ ನೀಡುವ ಕುರಿತು ಹೇಳುತ್ತಾ ಓರ್ವ ವ್ಯಕ್ತಿಯು ಪ್ರವಾದಿವರ್ಯರ(ಸ) ಮುಂದೆ ಹಾಜರಾದರು. ಅವರು ಹೇಳಿದ್ದೆಲ್ಲವನ್ನೂ ಆಲಿಸಿದ ಪ್ರವಾದಿವರ್ಯರು(ಸ) ಹೀಗೆಂದರು: ನೀವು ಹೇಳಿದಂತೆ ಬದುಕಿದರೆ ಖಂಡಿತವಾಗಿಯೂ ನೀವು ಸ್ವರ್ಗ ಪ್ರವೇಶಿಸುವಿರಿ. ಆದರೆ ಯಾವುದೇ ಕಾರಣದಿಂದಲೂ ತಂದೆ ತಾಯಂದಿರೊಂದಿಗೆ ಕೆಟ್ಟದ್ದಾಗಿ ವರ್ತಿಸದಿದ್ದರೆ ಮಾತ್ರ.

ಆರಾಧನಾ ಕರ್ಮಗಳನ್ನು ಯಥಾವತ್ತಾಗಿ ನಿರ್ವಹಿಸುತ್ತಾ ಬಂದರೂ ತಂದೆ ತಾಯಂದಿರ ಜೊತೆಗಿನ ಕರ್ತವ್ಯಗಳನ್ನು ನಿಭಾಯಿಸದಿದ್ದರೆ ಅವರೊಂದಿಗೆ ಕೆಟ್ಟದಾಗಿ ಅಗೌರವದಿಂದ ವರ್ತಿಸಿದರೆ ಮರಣಾನಂತರ ಕಠಿಣವಾದ ಶಿಕ್ಷೆಯು ಅನಿವಾರ್ಯವಾಗಿ ದೊರೆಯುತ್ತದೆ ಎಂಬುದನ್ನು ಮೇಲಿನ ಪ್ರವಾದಿವಚನ ಸೂಚಿಸುತ್ತದೆ.

ಅಬೂಬಕರ್(ರ) ಹೇಳುತ್ತಾರೆ ಪ್ರವಾದಿವರ್ಯರು(ಸ) ಕೇಳಿದರು: ಮಹಾ ಪಾಪಗಳಲ್ಲಿ ಅತ್ಯಂತ ದೊಡ್ಡ ಮಹಾ ಪಾಪ ಯಾವುದೆಂದು ನಾನು ಹೇಳಲೇ? ಆಗ ಅನುಚರರು, ಹೇಳಿ ಪ್ರವಾದಿಗಳೇ ಎಂದಾಗ, ಪ್ರವಾದಿವರ್ಯರು(ಸ) ಹೇಳಿದರು, 'ಅಲ್ಲಾಹನಿಗೆ ಭಾಗಿದಾರರನ್ನಾಗಿ ಮಾಡುವುದು ಮತ್ತು ತಂದೆ ತಾಯಂದಿರನ್ನು ನೋಯಿಸುವುದು.' (ಬುಖಾರಿ ಮುಸ್ಲಿಮ್)

ಇನ್ನೊಂದು ಪ್ರವಾದಿವಚನದಲ್ಲಿ ಹೀಗಿದೆ: ತಾಯಂದಿರಿಗೆ ಕಿರುಕುಳ ನೀಡುವುದು ಮಕ್ಕಳನ್ನು ಹೂಳುವಂತಹ ಮಹಾ ಪಾಪವಾಗಿದೆ. (ಮುಸ್ಲಿಮ್)

ಅನಸ್ ಬಿನ್ ಮಾಲಿಕ್(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರ(ಸ) ಶಿಷ್ಯಂದಿರಲ್ಲಿ ಅಲ್ಕಮ ಪ್ರಮುಖರಾಗಿದ್ದರು. ಅವರು ಪರಮ ದೇವಭಕ್ತರೂ ನಿರ್ಮಲ ಹೃದಯಿ ಮತ್ತು ದಯಾಳುವಾಗಿದ್ದರು. ಅವರಿಗೆ ಮಾರಕ ರೋಗವೊಂದು ಬಾಧಿಸಿತು. ಆಗ ಅವರ ಪತ್ನಿಯು ಪ್ರವಾದಿವರ್ಯರ(ಸ) ಮುಂದೆ ಹಾಜರಾಗಿ ತನ್ನ ಪತಿಗಾಗಿ ಪ್ರಾರ್ಥಿಸುವಂತೆ ವಿನಂತಿಸಿದರು. ಕೂಡಲೇ ಪ್ರವಾದಿವರ್ಯರು(ಸ) ತನ್ನ ಸಂಗಾತಿಗಳಾದ ಬಿಲಾಲ್ ಬಿನ್ ರಬಾಹ್, ಅಲಿ ಬಿನ್ ಅಬೂತಾಲಿಬ್, ಉಮರುಲ್ ಫಾರೂಕ್ ಮುಂತಾದವರನ್ನು ರೋಗಿಯ ಸಂದರ್ಶನ ಮಾಡಿ ವಿವರ ತಿಳಿಸುವಂತೆ ಅವರ ಮನೆಗೆ ಕಳುಹಿಸಿದರು. ಅವರು ಅಲ್ಕಮರವರಿಗೆ ಬೇಕಾದ ಶುಶ್ರೂಷೆಗಳನ್ನು ಮಾಡಿದರು. ಅದರಿಂದ ಗುಣಮುಖರಾಗದ ಅವರು ಮರಣಾಸನ್ನರಾದರು. ಅವರ ಬಳಿ ಬಂದು ಕಲಿಮ ಶಹಾದತ್ ಉಚ್ಚರಿಸಲು ಹೇಳಿ ಕೊಟ್ಟರು. ಆದರೆ ಲಾ ಇಲಾಹ ಇಲ್ಲಲ್ಲಾಹ್ ಎಂದುಚ್ಚರಿಸಲು ಅಲ್ಕಮರಿಗೆ ಸಾಧ್ಯವಾಗಲಿಲ್ಲ. ಕೂಡಲೇ ಬಿಲಾಲ್‌ರವರು ಪ್ರವಾದಿವರ್ಯರ(ಸ) ಬಳಿಗೆ ತೆರಳಿ ವಿಷಯ ತಿಳಿಸಿದರು.

ಎಲ್ಲವನ್ನೂ ಆಲಿಸಿದ ಪ್ರವಾದಿವರ್ಯರು(ಸ): ಅವರ ತಂದೆತಾಯಂದಿರು ಈಗಲೂ ಜೀವಂತ ಇದ್ದಾರೆಯೇ? ಎಂದು ಕೇಳಿದರು.

ತಂದೆ ಮೊದಲೇ ನಿಧನರಾಗಿದ್ದಾರೆ. ಆದರೆ ವೃದ್ದೆಯಾದ ತಾಯಿ ಈಗಲೂ ಜೀವಂತವಿದ್ದಾರೆ. ಅವರ ಜೊತೆಯೇ ವಾಸಿಸುತ್ತಿದ್ದಾರೆ.

ಆಗ ಪ್ರವಾದಿವರ್ಯರು(ಸ) ಬಿಲಾಲ್‌ರೊಂದಿಗೆ: ಅವರ ತಾಯಿಗೆ ನನ್ನ ಸಲಾಮ್ ತಿಳಿಸಿರಿ. ಅವರಿಗೆ ಏನೂ ತೊಂದರೆಯಿಲ್ಲ ಎಂದಾದರೆ ಇಲ್ಲಿಗೆ ಬರಲಿ. ಬರಲು ತೊಂದರೆಯಿದೆಯೆಂದಾದರೆ ನಾನೇ ಅಲ್ಲಿಗೆ ಬರುವೆನು ಎಂದು ತಿಳಿಸಿರಿ.

ಅಲ್ಕಮ(ರ) ರವರ ತಾಯಿ ಪ್ರವಾದಿವರ್ಯರ(ಸ) ಸನ್ನಿಧಿಗೆ ಹಾಜರಾದರು. ಪ್ರವಾದಿವರ್ಯರು ಅವರನ್ನು ಗೌರವಾದರದಿಂದ ಸ್ವಾಗತಿಸಿ ಕುಶಲವನ್ನು ವಿಚಾರಿಸಿದರು. ಬಳಿಕ ಅಲ್ಕಮರವರ ಒಡನಾಟದ ಬಗ್ಗೆ ವಿಚಾರಿಸಿದರು. ಆಗ ಅವರು: ನನ್ನ ಪುತ್ರ ಆರಾಧನಾ ಕರ್ಮದಲ್ಲಿ ತುಂಬಾ ನಿಷ್ಠೆಯಿರುವವನಾಗಿದ್ದ. ಇಸ್ಲಾಮಿನ ಎಲ್ಲಾ ಕಾರ್ಯಗಳನ್ನು ಬಹಳ ಶ್ರದ್ಧೆಯಿಂದ ಪಾಲಿಸುತ್ತಿದ್ದ. ಆದರೆ ನನ್ನೊಂದಿಗಿನ ವರ್ತನೆ ಸರಿಯಿರಲಿಲ್ಲ. ತುಂಬಾ ಕೆಟ್ಟದ್ದಾಗಿ ವರ್ತಿಸುತ್ತಿದ್ದ. ಹಲವಾರು ಬಾರಿ ಆತನ ಪತ್ನಿಯ ಮುಂದೆ ನನ್ನನ್ನು ಅವಹೇಳನ ಮಾಡುತ್ತಿದ್ದ. ಆತನ ಪತ್ನಿಯ ಕೈಕೆಳಗೆ ನನಗೆ ಜೀವಿಸುವಂತಹ ಪರಿಸ್ಥಿತಿ ಉಂಟಾಗಿತ್ತು. ಇದರಿಂದ ನಾನು ತುಂಬಾ ನೊಂದುಕೊಂಡಿದ್ದೆ. ಇದು ನಿರಂತರ ಪ್ರತಿ

ದಿನವೂ ನಡೆಯುತ್ತಿತ್ತು. ಇದರಿಂದ ನನಗೆ ಆತನ ಬಗ್ಗೆ ತುಂಬಾ ಬೇಸರವಿದೆ ಎಂದರು.

ಎಲ್ಲವನ್ನು ಆಲಿಸಿದ ಪ್ರವಾದಿವರ್ಯರು(ಸ) ವಿಷಯವನ್ನು ಅರ್ಥೈಸಿದರು. ಬಳಿಕ , 'ಅಲ್ಕಮಾರಿಗೆ ಕಲಿಮ ಉಚ್ಚರಿಸಲು ಸಾಧ್ಯವಾಗದೇ ಇರಲು ತಾಯಿಯೊಂದಿಗೆ ಕೆಟ್ಟ ವರ್ತನೆಯೇ ಕಾರಣ' ಎಂದು ಹೇಳಿದರು. ಬಳಿಕ ಪ್ರವಾದಿವರ್ಯರು(ಸ) ಬಿಲಾಲ್(ರ)ರವರನ್ನು ಕರೆದು ಅಲ್ಕಮರನ್ನು ಸುಡಲು ಕಟ್ಟಿಗೆ ತರುವಂತೆ ಹೇಳಿದರು. ಇದನ್ನು ಕೇಳಿದ ಆ ಮಾತೆ ಕೇಳಿದರು, 'ಅಲ್ಲಾಹನ ಪ್ರವಾದಿಗಳೇ ಏನು ಮಾಡುತ್ತೀರಿ? ನನ್ನ ಕಣ್ಣ ಮುಂದೆಯೇ ನನ್ನ ಮಗನನ್ನು ಸುಟ್ಟು ಹಾಕುತ್ತೀರಾ? ಏನಿದು? ನಾನು ಅದನ್ನು ಹೇಗೆ ಸಹಿಸಲಿ?'

ಆಗ ಪ್ರವಾದಿವರ್ಯರು(ಸ): ನೋಡಿ, ಅಲ್ಲಾಹನ ಶಿಕ್ಷೆಯು ಇದಕ್ಕಿಂತ ಅದೆಷ್ಟೋ ಪಟ್ಟು ಅಧಿಕವಿದೆ. ಅದರಿಂದ ಪಾರಾಗಬೇಕಾದರೆ ನೀವು ಅವರನ್ನು ಕ್ಷಮಿಸಬೇಕು. ಇಲ್ಲದಿದ್ದರೆ ಅವರ ನಮಾಝ್ ಉಪವಾಸ ಯಾವುದೂ ಅಲ್ಲಾಹನ ಶಿಕ್ಷೆಯಿಂದ ಅವರನ್ನು ರಕ್ಷಿಸಲು ಸಾಧ್ಯವಿಲ್ಲ ಎಂದರು.

ಇದನ್ನು ಕೇಳಿದ ಆ ಮಾತೆ ಅಲ್ಕಮರನ್ನು ಕ್ಷಮಿಸಿದರು. ಕೂಡಲೇ ಬಿಲಾಲ್‌ರನ್ನು ಅಲ್ಕಮರ ಬಳಿಗೆ ಕಳುಹಿಸಿದರು. ಅಲ್ಕಮ(ರ)ರವರು ಶಹಾದತ್ ಕಲಿಮವನ್ನು ಸ್ಫುಟವಾಗಿ ಉಚ್ಚರಿಸಿದರು - ಲಾಇ ಲಾಹ ಇಲ್ಲಲ್ಲಾಹ್.

ಅಲ್ಲಾಹನೆಡೆಗೆ ಧಾವಿಸಿದ ಅಲ್ಕಮ್(ರ)ರವರ ಜನಾಝಾ ನಮಾಝ್‌ನ ನೇತೃತ್ವ ವನ್ನು ಪ್ರವಾದಿವರ್ಯರೇ(ಸ) ವಹಿಸಿದ್ದರು.

ಒಮ್ಮೆ ಪ್ರವಾದಿವರ್ಯರು(ಸ) ಮಿಂಬರ್‌ನಲ್ಲಿ(ಭಾಷಣ ಪೀಠದಲ್ಲಿ) ನಿಂತು ಪ್ರವಚನ ನೀಡುತ್ತಿದ್ದಾಗ ಮೂರು ಬಾರಿ 'ಆಮೀನ್' ಎಂದು ಹೇಳಿದರು. ಪ್ರವಚನ ಪೂರ್ಣಗೊಂಡ ಬಳಿಕ ಮಿಂಬರ್‌ನಿಂದ ಕೆಳಗಿಳಿದು ಬಂದರು. ಆಗ ಅನುಚರರು, 'ನೀವು ಯಾಕೆ ಮೂರು ಬಾರಿ ಆಮೀನ್ ಹೇಳಿದಿರಿ' ಎಂದು ಪ್ರಶ್ನಿಸಿದರು. ಅದಕ್ಕೆ ಪ್ರವಾದಿವರ್ಯರು(ಸ) ಹೀಗೆ ಉತ್ತರಿಸಿದರು:

ನಾನು ಮಿಂಬರ್ ಮೇಲೆ ಏರಿದಾಗ ದೇವಚರ ಜಿಬ್‌ರೀಲ್ ನನ್ನ ಬಳಿ ಬಂದು, 'ತಮ್ಮ ಹೆಸರು ಕೇಳಿಯೂ ಸ್ವಸ್ತಿವಚನ ಹೇಳದವನು ನಾಶವಾಗಲಿ' ಎಂದು ಹೇಳಿದಾಗ ನಾನು ಆಮೀನ್ ಎಂದು ಹೇಳಿದೆನು. ಜಿಬ್‌ರೀಲ್ ಎರಡನೆಯ ಬಾರಿ 'ರಮಝಾನ್ ಮಾಸದ ಆಗಮನವಾಗಿ ಅದರ ಪ್ರತಿಫಲ ಆಸ್ವದಿಸದೆ, ಅದರಲ್ಲಿ ಅಲ್ಲಾಹನ ಅನುಗ್ರಹ ಯಾಚಿಸದೆ, ಅದನ್ನು ಫಲಪ್ರದ ಗೊಳಿಸಲು ಶ್ರಮಿಸದೆ ಇರುವವನು ನಾಶವಾಗಲಿ'

ಎಂದು ಹೇಳಿದಾಗ ನಾನು ಆಮೀನ್ ಎಂದು ಹೇಳಿದೆ. ಮೂರನೆಯದಾಗಿ ಜಿಬ್ರೀಲ್, 'ತಂದೆ ತಾಯಂದಿರು ಬದುಕಿದ್ದೂ ಅವರನ್ನು ಕರುಣೆಯಿಂದ ಶುಶ್ರೂಷೆ, ಸೇವೆ ಮಾಡದೆ ಇರುವವನನ್ನು ಅಲ್ಲಾಹನು ಶಪಿಸಲಿ' ಎಂದು ಹೇಳಿದಾಗ ನಾನು ಆಮೀನ್ ಎಂದು ಹೇಳಿದೆ. (ಮುಸ್ಲಿಮ್)

ತಂದೆ ತಾಯಿಯ ಮಹತ್ವವಿದು. ತಂದೆ ತಾಯಂದಿರನ್ನು ನಿರ್ಲಕ್ಷೆಯಿಂದ ನೋಡುವವರನ್ನು ಅಲ್ಲಾಹನು ಶಪಿಸಿರುತ್ತಾನೆ. ಅಲ್ಲಾಹನ ಮಲಾಯಿಕ್‌ಗಳು (ದೇವಚರರು) ಶಪಿಸಿರುತ್ತಾರೆ. ಪ್ರವಾದಿವರ್ಯರೂ(ಸ) ಶಪಿಸಿರುತ್ತಾರೆ.

ಅಬೂಹುರ್ರೈರಾ(ರ)ರಿಂದ ವರದಿಯಾಗಿದೆ. ಒಬ್ಬನಿಗೆ ವಾರ್ಧಕ್ಯ ಬಾಧಿಸಿದ ತಂದೆ-ತಾಯಿ ಅಥವಾ ಅವರಲ್ಲಿ ಓರ್ವರು ದೊರೆತೂ ಕೂಡಾ ಅವರು ಅವನಿಗೆ ಸ್ವರ್ಗ ಲಭಿಸಲು ಕಾರಣಕರ್ತರಾಗದಿದ್ದರೆ ಆತ ವಿಫಲನಾದಂತೆ, ಅವನು ನಾಶವಾದಂತೆ, ಅವನು ಸೋತು ಹೋದಂತೆ ಎಂದು ಹೇಳಿದರು.

ಚುಚ್ಚು ಮಾತಿನಿಂದ, ಕೃತಿಯಿಂದ ಮಾತಾಪಿತರ ಮನನೋಸಬೇಕೆಂದಿಲ್ಲ ಮಾನಸಿಕ ವಾಗಿ ಅವರನ್ನು ದ್ವೇಷಿಸಿದರೂ ಅದು ಮಹಾ ಕೃತಘ್ನತೆ ಮತ್ತು ಮಹಾಪಾಪವಾಗಿದೆ.

ಅಬೂಹುರ್ರೈರಾ(ರ)ರಿಂದ ವರದಿಯಾಗಿದೆ. ನಿಮ್ಮ ಮಾತಾಪಿತರ ಜೊತೆ ನೀವು ಕೋಪದಿಂದ ವರ್ತಿಸಬೇಡಿರಿ. ಯಾರಾದರೂ ಹಾಗೆ ಮಾಡಿದರೆ ಅದು ಮಹಾ ಕೃತಘ್ನತೆಯಾಗಿದೆ ಎಂದು ಪ್ರವಾದಿವರ್ಯರು(ಸ) ಹೇಳಿರುತ್ತಾರೆ.

ತಂದೆ ತಾಯಂದಿರನ್ನು ಧಿಕ್ಕರಿಸುವುದು ಬಹುದೇವಾರಾಧನೆ ಮಾಡಿದಂತೆ ಮತ್ತು ಅದು ಕೊಲೆ ಕೃತ್ಯ ನಡೆಸಿದಂತೆ ಮಹಾಪಾಪವಾಗಿದೆ. ಅಲ್ಲಾಹನ ಪ್ರವಾದಿವರ್ಯರು(ಸ) ಹೇಳಿರುತ್ತಾರೆ: ಅಲ್ಲಾಹನಿಗೆ ಸಹಭಾಗಿಗಳನ್ನಾಗಿ ಮಾಡುವುದು ತಂದೆ ತಾಯಿಯರ ಮಾತುಗಳನ್ನು ದಿಕ್ಕರಿಸುವುದು, ಅನ್ಯಾಯವಾಗಿ ಕೊಲೆ ಕೃತ್ಯ ನಡೆಸುವುದು ಸುಳ್ಳು ಆಣೆ ಹಾಕುವುದು ಮುಂತಾದುವುಗಳು ಮಹಾ ಪಾಪವಾಗಿದೆ.

## ವಿಜಯದ ಹಾದಿ

ತಂದೆ ತಾಯಂದಿರನ್ನು ಪ್ರಾಮಾಣಿಕವಾಗಿ ಪ್ರೀತಿಸಿ ಅದನ್ನು ಯಥಾವತ್ತಾಗಿ ಪಾಲಿಸಿದವನಿಗೆ ಅಲ್ಲಾಹನು ಲೆಕ್ಕವಿಲ್ಲದಷ್ಟು ಅನುಗ್ರಹಗಳನ್ನು ನೀಡುವುದಾಗಿ ವಾಗ್ದಾನ ನೀಡಿದ್ದಾನೆ. ಅದರಲ್ಲಿ ಕೆಲವನ್ನು ಈ ಭೂಮಿಯಲ್ಲಿ ನೀಡಿದರೆ ಉಳಿದವುಗಳನ್ನು ಪರಲೋಕದಲ್ಲಿ ನೀಡುತ್ತಾನೆ.

ಮಾತಾಪಿತರಿಗೆ ಕೃತಜ್ಞತೆ ತೋರುವುದು ಅಲ್ಲಾಹನಿಗೆ ಕೃತಜ್ಞತೆ ತೋರಿದಂತೆ ಎಂದು ಭಾವಿಸಿರಿ. ಅವರನ್ನು ಅನುಸರಿಸುವುದು ಕೂಡಾ ಅಲ್ಲಾಹನ ಅನುಸರಣೆ ಎಂದು ಭಾವಿಸಿರಿ. ಅವರಿಗೆ ಗೌರವಾದರ ನೀಡುವುದು ಕೂಡಾ ಅಲ್ಲಾಹನಿಗೆ ಗೌರವಾದರ ನೀಡಿದಂತೆ ಎಂದು ಭಾವಿಸಿರಿ. ಅವರನ್ನು ಸಾಂತ್ವನಿಸುವುದು ಅಲ್ಲಾಹನನ್ನು ಆರಾಧಿಸಿ ದಂತೆ, ಅವರಿಂದ ಅನುಗ್ರಹ ಪ್ರೀತಿಯನ್ನು ಗಳಿಸಿಕೊಳ್ಳುವುದು ದೇವ ಸಂಪ್ರೀತಿ ಗಳಿಸಿ ದಂತೆ. ಅಲ್ಲಾಹ್ ಮತ್ತು ಆತನ ಪ್ರವಾದಿಗಳ ನಂತರದ ಸ್ಥಾನವನ್ನು ಇಸ್ಲಾಮ್ ಮಾತಾ ಪಿತರಿಗೆ ನೀಡಿದೆ. ಇಸ್ಲಾಮಿನಲ್ಲಿ ತಂದೆತಾಯಂದಿರಿಗಿರುವ ಸ್ಥಾನವನ್ನು ನಮಾಝ್‌ನ ಜೊತೆ ಜೋಡಿಸಿದೆ. ಅದರ ನಂತರದ ಸ್ಥಾನವನ್ನು ಜಿಹಾದ್‌ಗೆ ನೀಡಿದೆ. ಅಂದರೆ ತಂದೆ ತಾಯಂದಿರ ಸಂರಕ್ಷಣೆಯು ಜಿಹಾದ್‌ಗಿಂತಲೂ ಶ್ರೇಷ್ಠವಾದ ಪುಣ್ಯ ಕರ್ಮವಾಗಿದೆ.

ಅಬ್ದುಲ್ಲಾ ಬಿನ್ ಮಸ್‌ಊದ್(ರ)ರಿಂದ ವರದಿಯಾಗಿದೆ. ನಾನು ಪ್ರವಾದಿಯವ ರೊಡನೆ(ಸ), 'ಅಲ್ಲಾಹನಿಗೆ ಅತ್ಯಂತ ಪ್ರೀತಿಯ ಶ್ರೇಷ್ಠ ಕರ್ಮ ಯಾವುದು?' ಎಂದು ಕೇಳಿದೆ. ಅದಕ್ಕೆ ಪ್ರವಾದಿವರ್ಯರು(ಸ), 'ಸಮಯ ನಿಷ್ಠೆಯಿಂದ ನಮಾಝ್ ನಿರ್ವಹಿಸುವುದು' ಎಂದರು. 'ಆನಂತರದ ಶ್ರೇಷ್ಠ ಕರ್ಮ ಯಾವುದು?' ಎಂದು ಕೇಳಿದೆ. 'ತಂದೆ ತಾಯಂದಿರ ಸೇವೆ ಮಾಡುವುದು' ಎಂದರು. 'ಆನಂತರದ ಶ್ರೇಷ್ಠ ಕರ್ಮ ಯಾವುದು?' ಎಂದು ಕೇಳಿದೆ. ಆಗ ಪ್ರವಾದಿವರ್ಯರು(ಸ), 'ಅಲ್ಲಾಹನ ಮಾರ್ಗದಲ್ಲಿ ಜಿಹಾದ್ ನಡೆಸುವುದಾಗಿದೆ' ಎಂದರು. **(ಬುಖಾರಿ ಮುಸ್ಲಿಮ್)**

ಜಿಹಾದ್‌ಗಿಂತ ಹೆಚ್ಚಿನ ಮಹತ್ವ ತಂದೆ ತಾಯಂದಿರಿಗೆ ಮಾಡುವ ಸೇವೆಗೆ ಇರುವ ಬಗ್ಗೆ ಇನ್ನು ಹಲವು ಘಟನೆಗಳಿವೆ. ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್(ರ)ರಿಂದ ವರದಿ ಯಾಗಿದೆ. ಓರ್ವರು ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾಗಿ, 'ಅಲ್ಲಾಹನ ಸಂಪ್ರೀತಿ ಬಯಸಿ ಹಿಜ್ರತ್ ಹೋಗಲು ಬಯಸುವೆನೆಂದೂ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುವೆನೆಂದೂ ಪ್ರತಿಜ್ಞೆ ಮಾಡುವೆ' ಎಂದು ಹೇಳಿದರು. ಆಗ ಪ್ರವಾದಿವರ್ಯರು(ಸ), 'ನಿನ್ನ ಮಾತಾಪಿತರು ಜೀವಂತರಿದ್ದಾರೆಯೇ?' ಎಂದು ಕೇಳಿ ದರು. ಆಗ ಅವರು, 'ಹೌದು. ಅವರೀರ್ವರೂ ಬದುಕಿದ್ದಾರೆ' ಎಂದು ಹೇಳಿದರು. 'ನೀವು ಅಲ್ಲಾಹನ ಸಂಪ್ರೀತಿಯನ್ನು ಬಯಸುತ್ತೀರಿ ತಾನೆ?' ಎಂದು ಪ್ರವಾದಿ(ಸ) ಕೇಳಿದಾಗ ಹೌದೆಂದು ಅವರು ಉತ್ತರಿಸಿದರು. 'ಹಾಗಾದರೆ ನಿಮ್ಮ ಮಾತಾಪಿತರ ಬಳಿಗೆ ತೆರಳಿ ಚೆನ್ನಾಗಿ ಅವರ ಸೇವೆ ಮಾಡಿರಿ' ಎಂದು ಪ್ರವಾದಿವರ್ಯರು(ಸ) ಆದೇಶಿಸಿದರು. **(ಬುಖಾರಿ ಮುಸ್ಲಿಮ್)**

ಈ ವಿಚಾರವನ್ನು ಮತ್ತೊಂದು ಶೈಲಿಯಲ್ಲಿ ಹೀಗೆ ವಿವರಿಸಲಾಗಿದೆ:

ಓರ್ವರು ಪ್ರವಾದಿವರ್ಯರ(ಸ) ಬಳಿ ಬಂದು ಯುದ್ಧದಲ್ಲಿ ಭಾಗವಹಿಸಲು ಅನುಮತಿ ನೀಡುವಂತೆ ವಿನಂತಿಸಿದರು. ಆಗ ಪ್ರವಾದಿ(ಸ) ಕೇಳಿದರು, 'ನಿಮಗೆ ವಯೋವೃದ್ಧರಾದ ಮಾತಾಪಿತರಿದ್ದಾರೆಯೇ?' ಅವರು ಹೌದೆಂದು ಉತ್ತರಿಸಿದಾಗ, 'ಅವರ ಸೇವೆಗಾಗಿ ಮನೆಯಲ್ಲಿ ನಿಮ್ಮ ಹೊರತು ಬೇರೆ ಯಾರಾದರೂ ಇದ್ದಾರೆಯೇ?' ಎಂದು ಕೇಳಿದರು. ಇಲ್ಲವೆಂದಾಗ, "ನೀವು ಮರಳಿ ಹೋಗಿ ಅವರ ಸೇವೆ ಮಾಡಿರಿ. ಇದು ನಿಮ್ಮ 'ಜಿಹಾದ್' ಆಗಿದೆ" ಎಂದರು. ನಂತರ 'ಸ್ವರ್ಗವು ತಾಯಿಯ ಪಾದದಡಿಯಲ್ಲಿದೆ' ಎಂದರು. ಮಾತಾಪಿತರ ಮರಣದೊಂದಿಗೆ ಅವರ ಸೇವೆ ಕೊನೆಗೊಳ್ಳದು. ನಮ್ಮ ಮರಣದ ವರೆಗೆ ಆ ಹೊಣೆಗಾರಿಕೆ ನಿರಂತರ ಮುಂದುವರಿಯುವುದು.

ಅಬೂ ಉಸೈದ್ ಮಾಲಿಕ್ ಬಿನ್ ರಬೀಅತುಸ್ಸಾಇದ್(ರ)ರಿಂದ ವರದಿಯಾಗಿದೆ. ನಾವು ಪ್ರವಾದಿವರ್ಯರ(ಸ) ಜೊತೆಯಲ್ಲಿದ್ದಾಗ ಬನೂ ಸಲಮ ಗೋತ್ರಕ್ಕೆ ಸೇರಿದ ವ್ಯಕ್ತಿಯೊಬ್ಬರು ಪ್ರವಾದಿವರ್ಯರ ಬಳಿ ಹೀಗೆ ಕೇಳಿದರು, 'ಅಲ್ಲಾಹನ ಸಂದೇಶವಾಹಕರೇ, ಮೃತರಾದ ನನ್ನ ತಂದೆ ತಾಯಂದಿರಿಗಾಗಿ ಇನ್ನು ಏನಾದರೂ ಒಳಿತು ಮಾಡಬಹುದೇ?' 'ಮಾಡಬಹುದು. ಅವರಿಗಾಗಿ ಪ್ರಾರ್ಥಿಸುತ್ತಿರಿ. ಅವರೀರ್ವರ ಪಾಪ ವಿಮೋಚನೆಗಾಗಿ ಪ್ರಾರ್ಥಿಸಿರಿ. ಅವರು ಮಾಡಿದ ಕರಾರುಗಳನ್ನು ಪಾಲಿಸಿರಿ. ಅವರಿಲ್ಲದೆ ಸಾಧ್ಯವಿಲ್ಲದಂತಹ ಕುಟುಂಬ ಸಂಬಂಧಗಳನ್ನು ಸುಭದ್ರಗೊಳಿಸಲು ಅವರ ಹಿರಿಯರನ್ನು ಗೌರವಿಸಿರಿ.'

ಅನ್ಸಾರ್‌ಗಳಿಗೆ ಸೇರಿದವರೋರ್ವರು ಪ್ರವಾದಿವರ್ಯರೊಡನೆ ಬಂದು, 'ಮಾತಾಪಿತರು ಮರಣ ಹೊಂದಿದ ಬಳಿಕ ಅವರೊಂದಿಗೆ ನಮಗೆ ಉತ್ತಮ ಸಂಬಂಧ ಸ್ಥಾಪಿಸಲು ಸಾಧ್ಯವಿದೆಯೇ?' ಎಂದು ಕೇಳಿದರು. ಆಗ ಪ್ರವಾದಿವರ್ಯರು(ಸ) 'ಹೌದು ಸಾಧ್ಯವಿದೆ. ನಾಲ್ಕು ಕಾರ್ಯಗಳನ್ನು ಮಾಡಿದರೆ ಮರಣ ಹೊಂದಿದವರನ್ನು ನಿಮಗೆ ತೃಪ್ತಿ ಪಡಿಸಲು ಸಾಧ್ಯವಿದೆ. ಮೊದಲನೆಯದಾಗಿ ಅವರ ಜನಾಝ ನಮಾಝ್‌ನಲ್ಲಿ ಭಾಗಿಯಾಗಿರಿ, ಎರಡನೆಯದಾಗಿ ಅವರ ಮಗ್‌ಫಿರತ್(ಕ್ಷಮೆ)ಗಾಗಿ ಅಲ್ಲಾಹನಲ್ಲಿ ಪ್ರಾರ್ಥಿಸುವುದು. ಮೂರನೆಯದಾಗಿ ಅವರ ಬಯಕೆ ಮತ್ತು ವಸಿಯತ್(ಉಯಿಲು)ಗಳನ್ನು ಪೂರ್ತಿಕರಿಸುವುದು. ಅವರ ಸಂಬಂಧಿಕರೊಂದಿಗೆ, ಆಪ್ತ ಮಿತ್ರರೊಂದಿಗೆ ಉತ್ತಮ ಸಂಬಂಧವಿರಿಸುವುದು' ಎಂದು ಹೇಳಿದರು.

ಅಬ್ದುಲ್ಲಾ ಬಿನ್ ಉಮರ್(ರ)ರಿಂದ ವರದಿಯಾಗಿದೆ. ಪ್ರವಾದಿವರ್ಯರು(ಸ) ಹೀಗೆ ಹೇಳುವುದನ್ನು ನಾನು ಕೇಳಿದ್ದೇನೆ, 'ಸದ್ಗುಣಗಳಲ್ಲಿ ಅತ್ಯಂತ ಶ್ರೇಷ್ಠವಾದುದು

ಓರ್ವನು ಆತನ ತಂದೆಯ ಮರಣದ ನಂತರ ತಂದೆಯ ಮಿತ್ರರ ಜೊತೆ ಉತ್ತಮ ಸಂಬಂಧ ಬೆಳೆಸುವುದು.' (ಮುಸ್ಲಿಮ್)

ಉಮರ್ ಬಿನ್ ಸಾಇದ್(ರ) ಹೇಳುತ್ತಾರೆ. ಪ್ರವಾದಿವರ್ಯರು(ಸ) ಒಮ್ಮೆ ಕುಳಿತುಕೊಂಡಿದ್ದರು. ಆಗ ಅಲ್ಲಿಗೆ ತನ್ನ ಸ್ತನಪಾನ ಸಂಬಂಧವಿರುವ ತಂದೆ ಬರುತ್ತಾರೆ. ಪ್ರವಾದಿವರ್ಯರು(ಸ) ಒಂದು ಬಟ್ಟೆಯನ್ನು ಅವರಿಗೆ ಹಾಸಿದರು. ಅತಿಥಿಯು ಅದರಲ್ಲಿ ಕುಳಿತರು. ನಂತರ ಸ್ತನಪಾನ ಸಂಬಂಧಿ ತಾಯಿ ಅಲ್ಲಿಗೆ ಬರುತ್ತಾರೆ. ಅವರಿಗೂ ತನ್ನ ಬಟ್ಟೆಯ ಒಂದು ಭಾಗವನ್ನು ಹಾಸುತ್ತಾರೆ. ಅವರು ಅದರಲ್ಲಿ ಕುಳಿತರು. ನಂತರ ಸ್ತನಪಾನ ಸಂಬಂಧಿ ಸಹೋದರನ ಆಗಮನವಾಗುತ್ತದೆ. ತಾನು ಕುಳಿತಿದ್ದ ಪೀಠದಿಂದ ಎದ್ದು ಅವರನ್ನು ಅದರಲ್ಲಿ ಕುಳ್ಳಿರಿಸಿದರು. (ಅಬೂ ದಾವೂದ್)

ತುಫೈಲ್(ರ) ಹೇಳುತ್ತಾರೆ. ಒಮ್ಮೆ ಪ್ರವಾದಿವರ್ಯರು(ಸ) ಮಸೀದಿಯಲ್ಲಿ ಬಡವರಿಗೆ, ದರಿದ್ರರಿಗೆ ಆಹಾರವನ್ನು ವಿತರಿಸುತ್ತಿದ್ದರು. ಆಗ ಓರ್ವ ವೃದ್ಧೆ ಅಲ್ಲಿಗೆ ಆಗಮಿಸಿದರು. ಆ ಅತಿಥಿಯನ್ನು ಪ್ರವಾದಿವರ್ಯರು(ಸ) ಗೌರವಾದರದಿಂದ ಸ್ವಾಗತಿಸಿ ದರು. ತನ್ನ ಚಾದರವನ್ನು ಕುಳಿತುಕೊಳ್ಳಲು ಅವರಿಗೆ ಹಾಸಿದರು. ಪ್ರವಾದಿವರ್ಯರು(ಸ) ಇಷ್ಟೊಂದು ಗೌರವಾದರಗಳನ್ನು ನೀಡಿದ ಆ ಮಾತೆ ಯಾರೆಂಬ ಕುತೂಹಲ ಪ್ರವಾದಿ ವರ್ಯರ(ಸ) ಅನುಚರರಲ್ಲಿ ಮೂಡಿತು. ಅನುಚರರಲ್ಲೋರ್ವರು ಈ ಬಗ್ಗೆ ವಿಚಾರಿಸಿ ದಾಗ ಅದು ಬಾಲ್ಯದಲ್ಲಿ ಎದೆಹಾಲುಣಿಸಿದ ಮಾತೆ ಎಂದು ಪ್ರವಾದಿವರ್ಯರು(ಸ) ಉತ್ತರಿಸಿದರು.

ಮಾತಾಪಿತರನ್ನು ಆಕ್ಷೇಪಿಸುವಂತಹ ಚುಚ್ಚುಮಾತುಗಳನ್ನಾಡುವಂತಹ ಯಾವುದೇ ಸಂದರ್ಭ ಮಕ್ಕಳಿಂದ ಉದ್ಭವಿಸಬಾರದು. ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್(ರ)ರಿಂದ ವರದಿಯಾಗಿದೆ. 'ಮಾನವನು ತನ್ನ ಮಾತಾಪಿತರ ಮೇಲೆ ಬೈಗುಳ ನಡೆಸುವುದು ಮಹಾಪಾಪಗಳಲ್ಲಿ ಸೇರಿದೆ.' ಆಗ ಅನುಚರರು, 'ಪ್ರವಾದಿಗಳೇ ಯಾರಾದರೂ ಮಾತಾಪಿತರ ಮೇಲೆ ಬೈಗುಳ ನಡೆಸುವರೇ?' ಎಂದು ಕೇಳುತ್ತಾರೆ. ಆಗ ಪ್ರವಾದಿ ವರ್ಯರು(ಸ), 'ಓರ್ವರು ಇನ್ನೋರ್ವರ ತಂದೆಯ ಮೇಲೆ ಬೈಗುಳ ನಡೆಸಿದರೆ ಆತನು ಈತನ ತಂದೆಯ ಮೇಲೆ ಬೈಗುಳ ನಡೆಸುವನು. ಆಗ ಮೊದಲಿನವನು ಈತನ ತಾಯಿಯ ವಿರುದ್ದ ಬೈಗುಳ ನಡೆಸುವನು. ಈತ ಆತನ ತಾಯಿಯ ವಿರುದ್ಧ ಬೈಗುಳ ನಡೆಸುವನು ಎಂದು ಹೇಳಿದರು.'

ಇನ್ನೊಂದು ವರದಿ ಹೀಗಿದೆ: 'ಮಹಾಪಾಪಗಳಲ್ಲಿ ಅತ್ಯಂತ ತೀಕ್ಷ್ಣವಾದುದು

ತಂದೆ ತಾಯಂದಿರನ್ನು ಶಪಿಸುವುದಾಗಿದೆ.' ಆಗ ಅನುಚರರು, 'ಅಲ್ಲಾಹನ ಸಂದೇಶ ವಾಹಕರೇ, ಯಾರಾದರೂ ತಂದೆ ತಾಯಂದಿರನ್ನು ಶಪಿಸುತ್ತಾನೆಯೇ?' ಎಂದು ಕೇಳಿದರು. ಆಗ ಪ್ರವಾದಿವರ್ಯರು(ಸ) ಹೇಳಿದರು, 'ಓರ್ವನು ಇನ್ನೊಬ್ಬನ ತಂದೆಗೆ ಬೈಯುವನು. ಆಗ ಆತ ಇವನ ತಂದೆಗೆ ಬೈಯುವನು. ಆತ ಈತನ ತಾಯಿಯ ವಿರುದ್ಧ ಬೈಗುಳ ಸುರಿಸುವನು. ಆಗ ಈತ ಆತನ ತಾಯಿಯ ವಿರುದ್ಧ ಬೈಗುಳ ಸುರಿಸುವನು ಎಂದು ಹೇಳುತ್ತಾರೆ.'

ಮಕ್ಕಳ ಸೊತ್ತಿನಿಂದ ಅವರ ಅನುಮತಿಯಿಲ್ಲದೆ ಅನಿವಾರ್ಯವಾದದ್ದನ್ನು ಪಡೆಯಲು ತಂದೆ ತಾಯಂದಿರಿಗೆ ಇಸ್ಲಾಮ್ ಅನುಮತಿ ನೀಡಿದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ, 'ತಂದೆತಾಯಂದಿರು ಮಕ್ಕಳ ಸೊತ್ತಿನಿಂದ ಮಾನ್ಯವಾದ ಆಹಾರವನ್ನು ಪಡೆಯಬಹುದಾಗಿದೆ. ಆದರೆ ಮಕ್ಕಳಿಗೆ ಅವರ ಅನುಮತಿಯಿಲ್ಲದೆ ಅವರ ಸೊತ್ತಿನಿಂದ ಯಾವುದನ್ನೂ ಪಡೆಯುವಂತಿಲ್ಲ.'

ಮಾತಾಪಿತರ ನಡುವಿನ ಸಂಬಂಧವನ್ನು ಬಲಪಡಿಸಲು ಪ್ರಾಮುಖ್ಯತೆ ನೀಡುವ ಉಜ್ವಲವಾದ ವಿಚಾರವನ್ನು ಪ್ರವಾದಿವರ್ಯರು(ಸ) ಹೇಳುತ್ತಾರೆ: ಓರ್ವನು ತನ್ನ ತಂದೆ ತಾಯಂದಿರ ಜೊತೆ ಪ್ರೀತಿ ವಾತ್ಸಲ್ಯ ಮತ್ತು ಗೌರವಾದರಗಳಿಂದ ವರ್ತಿಸಿದರೆ ಅದು ಅಲ್ಲಾಹನ ಮಾರ್ಗದಲ್ಲಿ ಸ್ವೀಕಾರಾರ್ಹವಾದ ಹಜ್ಜ್‌ನ ಪ್ರತಿಫಲವನ್ನು ಅವನ ಹೆಸರಲ್ಲಿ ದಾಖಲಿಸಲ್ಪಡುವುದು. ಆಗ ಓರ್ವರು, 'ಆಗ ಪ್ರತೀ ದಿನ ಹೀಗೇ ಮಾತಾ ಪಿತರೊಂದಿಗೆ ನೂರು ಬಾರಿ ವರ್ತಿಸಿದರೆ?' ಎಂದು ಕೇಳಿದರು. ಪ್ರವಾದಿವರ್ಯರು(ಸ) ಹೇಳಿದರು, 'ನೂರು ಪಟ್ಟು ಪುಣ್ಯ ನೀಡುವನು. ಅಲ್ಲಾಹನು ಅತ್ಯಂತ ಉದಾರನೂ ಸರ್ವಶಕ್ತನೂ ಪರಮೋನ್ನತನೂ ಆಗಿದ್ದಾನಲ್ಲವೇ.'

ಮಾತಾಪಿತರಿಗೆ ಒಳಿತು ಬಯಸಿ ಮಾಡಿದ ಸತ್ಕರ್ಮಕ್ಕೆ ಸಿಗುವ ಮಹತ್ವ ಮತ್ತು ದ್ರೋಹವೆಸಗಿದ ಕಾರಣಕ್ಕೆ ಸಿಗುವ ಕಠಿಣ ಶಿಕ್ಷೆಯ ಬಗ್ಗೆ ವಿವರಿಸುವ ಹಲವಾರು ಪ್ರವಾದಿ ವಚನಗಳಿವೆ. ಕೆಲವು ವಚನಗಳನ್ನು ಇಲ್ಲಿ ಉದ್ಧರಿಸಲಾಗಿದೆ.

ದೀರ್ಘಾಯಸ್ಸು ದೊರಕಲು. ಭೌತಿಕ ಸೌಕರ್ಯ ದೊರೆಯುವುದರಿಂದ ಯಾರಾದರೂ ಸಂತೋಷ ಬಯಸುವುದಾದರೆ ಆತನು ತಂದೆತಾಯಂದಿರ ಸೇವೆ ಮಾಡಲಿ. ಕುಟುಂಬ ಸಂಬಂಧ ಬಪಡಿಸಲಿ. **(ಅಹ್ಮದ್)**

ಪ್ರವಾದಿವರ್ಯರು(ಸ) ಹೇಳುತ್ತಾರೆ: ನಿಮ್ಮ ತಂದೆಯ ಸೇವೆ ನೀವು ಮಾಡಿದರೆ ನಿಮ್ಮ ಮಕ್ಕಳು ನಿಮ್ಮ ಸೇವೆಗೈಯುವರು. **(ಹಾಕಿಮ್)**

ಅಸ್ಮಾ ಬಿಂತಿ ಅಬೂಬಕ್ಕರ್(ರ)ರವರಿಂದ ವರದಿಯಾಗಿದೆ. ನನ್ನ ತಾಯಿ ನನ್ನ ಬಳಿಗೆ ಬಂದರು. ಆಗ ಆಕೆ ಬಹುದೇವಾರಾಧಕರಾಗಿದ್ದರು. ಇಸ್ಲಾಮ್ ಸ್ವೀಕರಿಸಿರಲಿಲ್ಲ. ನಾನು ಪ್ರವಾದಿವರ್ಯರೊಡನೆ(ಸ), 'ಇವರು ಬಹುದೇವಾರಾಧಕರಾಗಿದ್ದಾರೆ. ಇವರ ಬಗ್ಗೆ ನಾನು ಯಾವ ನಿರ್ಧಾರ ತಾಳಲಿ? ನಾನು ನನ್ನ ಮಾತೆಯೊಂದಿಗೆ ಕುಟುಂಬ ಸಂಬಂಧ ಬೆಳೆಸಲೇ?' ಎಂದು ಕೇಳಿದೆ. ಆಗ ಪ್ರವಾದಿವರ್ಯರು(ಸ) 'ನೀನು ನಿನ್ನ ಮಾತೆಯೊಂದಿಗೆ ಉತ್ತಮವಾದ ಸಂಬಂಧ ಬೆಳೆಸು' ಎಂದು ಹೇಳಿದರು. (ಬುಖಾರಿ)

ತಂದೆ ತಾಯಂದಿರು ಮುಸ್ಲಿಮೇತರರಾಗಿದ್ದರೂ ಅವರನ್ನು ಜೊತೆಯಲ್ಲಿ ಸೇರಿಸಿ ಕೊಂಡು ವಾಸಿಸಿರಿ. ಇಸ್ಲಾಮ್ ಅನುಮತಿಸಿದ ಎಲ್ಲಾ ಕಾರ್ಯಗಳಲ್ಲಿ ಅವರನ್ನು ಅನುಸರಿಸಿರಿ. ಅವರೊಂದಿಗೆ ಉತ್ತಮವಾಗಿ ವರ್ತಿಸಬೇಕೆಂದು ಇಸ್ಲಾಮ್ ಕಲಿಸುತ್ತದೆ. ಅವರಿಗೆ ವಾರೀಸು ಸೊತ್ತಿನಲ್ಲಿಯೂ ಪಾಲು ನೀಡಿರಿ.

ತಂದೆ ತಾಯಂದಿರ ಜೊತೆಗಿನ ವರ್ತನೆಯಲ್ಲಿ ಬಹಳಷ್ಟು ಎಚ್ಚರ ವಹಿಸಬೇಕು. ಅವರ ಪ್ರಾರ್ಥನೆಯು ನಿರಾಕರಿಸಲ್ಪಡುವಂತಹದ್ದಲ್ಲ.

ಅಬೂಹುರೈರಾ(ರ)ರಿಂದ ವರದಿಯಾಗಿದೆ. ಪ್ರವಾದಿವರ್ಯರು(ಸ) ಹೇಳಿದರು: ಮೂರು ಪ್ರಾರ್ಥನೆಗಳನ್ನು ಅಲ್ಲಾಹನು ಸ್ವೀಕರಿಸುತ್ತಾನೆಂಬುದರಲ್ಲಿ ಯಾವುದೇ ಸಂಶಯ ವಿಲ್ಲ. ಮರ್ದಕನ ವಿರುದ್ಧ ಮರ್ದಿತನ ಪ್ರಾರ್ಥನೆ, ಪ್ರಯಾಣಿಕನ ಪ್ರಾರ್ಥನೆ ಮತ್ತು ಮಗನ ವಿರುದ್ಧ ತಂದೆಯ ಪ್ರಾರ್ಥನೆಯಾಗಿದೆ. (ತಿರ್ಮಿದಿ)

ಹಾಗಾಗಿ ಮಾತಾಪಿತರ ಮನಸ್ಸನ್ನು ನೋಯಿಸುವಂತಹ ಯಾವುದೇ ಕಾರ್ಯ ನಿಮ್ಮಿಂದ ಸಂಭವಿಸಬಾರದು ಎಂದು ಪ್ರವಾದಿವರ್ಯರು ತಾಕೀತು ಮಾಡಿದ್ದಾರೆ.

ಆಯಿಶಾ(ರ)ರಿಂದ ವರದಿಯಾಗಿದೆ. ಓರ್ವ ತಂದೆ ಮತ್ತು ಪುತ್ರ ಅಲ್ಲಾಹನ ಸನ್ನಿಧಿಯಲ್ಲಿ ಹಾಜರಾದರು. ಆಗ ಪ್ರವಾದಿವರ್ಯರು(ಸ) ಆ ಮಗನಿಗೆ ಈ ರೀತಿ ಉಪದೇಶಿಸಿದರು: ನೀನು ನಿನ್ನ ತಂದೆಯ ಮುಂದಿನಿಂದ ನಡೆಯಬೇಡ. ಅವರು ಕುಳಿತುಕೊಳ್ಳುವುದಕ್ಕಿಂತ ಮುಂಚಿತವಾಗಿ ಕುಳಿತುಕೊಳ್ಳಬೇಡ. ಅವರ ಹೆಸರೆತ್ತಿ ಕರೆಯಬೇಡ. ಅವರನ್ನು ಆಕ್ಷೇಪಿಸಬೇಡ.

ಮತ್ತೊಮ್ಮೆ ಪ್ರವಾದಿವರ್ಯರು(ಸ) ಹೇಳಿದರು: ತಂದೆ ತಾಯಂದಿರು ನಿನ್ನೊಂದಿಗೆ ಕೋಪಗೊಂಡರೂ ಅವರನ್ನು ನೀನು ದುರುಗುಟ್ಟಿ ನೋಡದಿರು.

ಪ್ರವಾದಿವರ್ಯರು(ಸ) ಹೇಳಿದರು: ತಂದೆ ತಾಯಂದಿರು ನಿಮ್ಮನ್ನು ಎಷ್ಟೇ

ಬೈದರೂ ನಿಮ್ಮನ್ನು ಶಪಿಸಿದರೂ 'ಅಲ್ಲಾಹನು ನಿಮ್ಮ ಮೇಲೆ ಕರುಣೆಯ ಮಳೆ ಸುರಿಸಲಿ. ನಿಮ್ಮನ್ನು ಕ್ಷಮಿಸಲಿ' ಎಂದು ನೀನು ಹೇಳುತ್ತಿರಬೇಕು.

## ಮನೆಯೊಡತಿ ಮತ್ತು ಗುರುವರ್ಯರು

ಅಶಿತರವರ 'ಸ್ತಂಬನಂಜಳ್' ಎಂಬ ಸಣ್ಣಕತೆಯು ಬಾರೀ ಚರ್ಚೆಗೊಳಗಾಗಿತ್ತು. ಮನೆಯೊಡತಿಯು ಮುಂಜಾನೆ ಎದ್ದು ಮನೆಯ ಸುತ್ತಲೂ ಗುಡಿಸಿ ಸ್ವಚ್ಛಗೊಳಿಸಿ, ಬಳಿಕ ಚಹಾ ಮಾಡಿದಳು. ಮಕ್ಕಳಿಗೆ ಸ್ನಾನ ಮಾಡಿಸಿ, ಅವರಿಗೆ ಬಟ್ಟೆ ತೊಡಿಸಿ ಶಾಲೆಗೆ ಕಳುಹಿಸಿದಳು. ಬಳಿಕ ಮನೆಯ ಒಳಗೆ ಗುಡಿಸಿ ನೆಲ ಒರೆಸಿ ಸ್ವಚ್ಛಗೊಳಿಸಿದಳು. ಬಟ್ಟೆ ಬರೆಗಳನ್ನು ತೊಳೆದು, ಆಹಾರ ಸಿದ್ಧಪಡಿಸಿದಳು. ಅತಿಥಿಗಳಿಗೆ ಮತ್ತು ಪತಿಗೂ ಅದನ್ನು ಬಡಿಸಿದಳು. ಪತಿ ಊಟ ಮುಗಿಸುವಷ್ಟರಲ್ಲಿ ಲೆಕ್ಕ ಪರಿಶೋಧಕನು ಪತಿಯನ್ನು ಕೇಳಿಕೊಂಡು ಬಂದನು. ಆತನಿಗೂ ಚಹಾ ಮಾಡಿ ಕೊಟ್ಟಳು. ಲೆಕ್ಕ ಪರಿಶೋಧಕನ ಪ್ರಶ್ನೆಗೆ ಪತಿಯು 'ಪತ್ನಿಗೆ ಮೂವತ್ತೈದು ವಯಸ್ಸು, ಉದ್ಯೋಗವಿಲ್ಲ' ಎಂಬ ನೀರಸದ ಉತ್ತರ ನೀಡಿದನು. ಇದನ್ನು ಕೇಳಿದ ಆಕೆಯ ಹೃದಯವು ಬಲೂನ್ ತರ ಒಡೆದು ಹೋಯಿತು.

ನಮ್ಮ ಊರಲ್ಲಿ ಹೊರಗಡೆ ಹೋಗಿ ಉದ್ಯೋಗ ನಡೆಸದ ಮಹಿಳೆ ಕೆಲಸವಿಲ್ಲದ ನಿರುದ್ಯೋಗಿಯಾಗಿದ್ದಾಳೆ. ಆದ್ದರಿಂದಲೇ ಮನೆಯ ಕೆಲಸದಲ್ಲಿ ನಿರತಳಾಗಿ ದಣಿದು ಏದುಸಿರು ಬಿಡುವ ಮಹಿಳೆಯರನ್ನು ಕೂಡಾ ಕೆಲಸವಿಲ್ಲದ ನಿರುದ್ಯೋಗಿ ಎಂದು ನಮ್ಮ ಸಮಾಜ ಕರೆಯುತ್ತದೆ. ಅಥವಾ ಅವರಿಗೆ 'ಹೌಸ್ ವೈಫ್' ಎಂದು ಹೆಸರಿಡಲಾಗುತ್ತದೆ. ಎಷ್ಟೊಂದು ನಿಕೃಷ್ಟವಾದ ಕ್ರೂರವಾದ ಪದ ಪ್ರಯೋಗವಿದು. ಪಾಶ್ಚಾತ್ಯ ಲೌಕಿಕವಾದಿ ಗಳಿಗೆ ಇದು ಅನ್ವಯಿಸಬಹುದು. ನಿಜಕ್ಕೂ ಇದು ನಮಗೆ ಹೇಳಿ ಮಾಡಿಸಿದ್ದಲ್ಲ.

ಇಸ್ಲಾಮಿನ ದೃಷ್ಟಿಯಲ್ಲಿ ಮಹಿಳೆ ಮಾತೆ ಮತ್ತು ಕುಟುಂಬದ ವ್ಯವಸ್ಥಾಪಕಿಯಾಗಿದ್ದಾಳೆ. ಪ್ರವಾದಿವರ್ಯರು(ಸ) ಆಕೆಯನ್ನು ಕುಟುಂಬದ ಒಡತಿ ಎಂದು ಕರೆದಿದ್ದಾರೆ. ಅವರು ಹೇಳುತ್ತಾರೆ, 'ಮಹಿಳೆ ತನ್ನ ಸಂಗಾತಿಯ ಮನೆಯ ನಾಯಕಿಯಾಗಿದ್ದಾಳೆ.'

ಪುರುಷರಿಗಿಂತ ದುಪ್ಪಟ್ಟು ಕೆಲಸವನ್ನು ಮಹಿಳೆ ಮಾಡುತ್ತಾಳೆ. ಮುಂಜಾನೆ ಬೇಗನೆ ಏಳುತ್ತಾಳೆ. ತನ್ನ ಕೆಲಸ ಪ್ರಾರಂಭಿಸುತ್ತಾಳೆ. ರಾತ್ರಿ ತಡವಾಗಿ ಮುಗಿಸುತ್ತಾಳೆ. ತಡವಾಗಿಯೇ ಮಲಗುತ್ತಾಳೆ. ಹೆಚ್ಚಿನ ಹೊಣೆಗಾರಿಕೆ ಮತ್ತು ನೋವು ಆಕೆಗೇ ಇರುವುದು. ಮನೆ ಕೆಲಸವೆಂದರೆ ಸಾಮಾನ್ಯವಲ್ಲ, ಇತರೆಲ್ಲಾ ಕೆಲಸ ಕಾರ್ಯಗಳಿಗಿಂತ ಮಹತ್ವ

ಪೂರ್ಣವಾದುದು. ಆದರೂ ಹೆಚ್ಚಿನವರು ಅದನ್ನೊಂದು ಉದ್ಯೋಗವೆಂದು ಪರಿಗಣಿಸದೆ ತಾತ್ಸಾರವಾಗಿ ಕಾಣುತ್ತಾರೆಂಬುದು ವಿಚಿತ್ರ. ಪುರುಷನಿರಲಿ ಮಹಿಳೆ ಕೂಡಾ ತನ್ನ ಈ ಜವಾಬ್ದಾರಿಯುತವಾದ ಕಾರ್ಯವನ್ನು ಉದ್ಯೋಗವೆಂದು ಪರಿಗಣಿಸುವುದಿಲ್ಲ.

ಬೋಧಿಸುವುದನ್ನು ಮತ್ತು ಪಾಠ ಹೇಳಿಕೊಡುವ ಗುರುಗಳನ್ನು ಸಮಾಜ ಬಹಳ ಗೌರವದಿಂದ ನೋಡುತ್ತದೆ. ಅದೊಂದು ಮಹತ್ತರವಾದ ಸೇವೆಯೆಂದು ಪರಿಗಣಿಸಲಾಗುತ್ತದೆ. ಅದನ್ನು ತಪಸ್ಸು ಎಂದೂ ಭೂಮಿಯ ಅತಿ ಶ್ರೇಷ್ಠ ಕಾಯಕವೆಂದು ಪರಿಗಣಿಸಲಾಗುತ್ತದೆ. ಗುರುಗಳು ಕೇವಲ ಉದ್ಯೋಗಿಯಲ್ಲ, ಅವರು ಮುಂದಿನ ತಲೆಮಾರುಗಳ ಶಿಲ್ಪಿಯೆಂದು ಅವರನ್ನು ಅತ್ಯಧಿಕವಾಗಿ ಗೌರವಿಸಲ್ಪಡುವವರಾಗಿ ಪ್ರೀತಿಸಲ್ಪಡಲು ಅರ್ಹರೆಂಬುದು ಬಹಳ ಹಿಂದೆಯೇ ಸಾಬೀತುಗೊಂಡ ವಿಚಾರವಾಗಿದೆ. ಯಾಕೆಂದರೆ ಅವರು ಮಕ್ಕಳಿಗೆ ಶಿಕ್ಷಣ ನೀಡುತ್ತಾರೆ. ಗುರುವರ್ಯರನ್ನು ಗೌರವಿಸದವರನ್ನು ಸಮಾಜವು ಬಹಳ ನಿಕೃಷ್ಟರಾಗಿ ಕಾಣುತ್ತದೆ. ಮನೆಯಲ್ಲವೇ ಮೊದಲ ಪಾಠಶಾಲೆ. ಮಾತೆಯಲ್ಲವೇ ಮೊದಲ ಶಿಕ್ಷಕಿ.

ಕವಿ ಶೌಕಿ ಹೇಳುತ್ತಾರೆ –

ಮಾತೆಯೇ ಮೊದಲ ಪಾಠಶಾಲೆ
ನೀನು ಅದನ್ನು ಯಥಾವತ್ತಾಗಿ ಸುಸಜ್ಜಿತಗೊಳಿಸಿದರೆ,
ಅತ್ಯಂತ ಶ್ರೇಷ್ಠ ಸಮಾಜದ ನಿರ್ಮಾಣ ಮಾಡಿ
ಸುಸಜ್ಜಿತಗೊಳಿಸಿದಂತೆ!

ಆದ್ದರಿಂದ ಮಾತೆ ಈ ಅರ್ಥದಲ್ಲಿಯೂ ಅತ್ಯಂತ ಶ್ರೇಷ್ಠ ಶಿಕ್ಷಣ ನೀಡುವ ಕಾರಣದಿಂದ ಗೌರವಾರ್ಹಳಾಗಿದ್ದಾಳೆ.



# ಇತಿಹಾಸದಲ್ಲಿ ಮಾತೆ

ಮಾನವೇತಿಹಾದಲ್ಲಿ, ತಂದೆಗೆ ಪುತ್ರನು ನೀಡುವ ಗೌರವಾದರಗಳಿಗೆ, ಪ್ರವಾದಿ ಇಬ್ರಾಹೀಮ್(ಅ)ರ ಪುತ್ರ ಇಸ್ಮಾಈಲ್(ಅ)ರವರು ಅತ್ಯಂತ ಶ್ರೇಷ್ಠ ಮಾದರಿಯಾಗಿದ್ದಾರೆ. ವೃದ್ಧ ತಂದೆಯ ಆಸೆಯನ್ನು ಪೂರ್ತೀಕರಿಸಲು ತನ್ನ ಪ್ರಾಣವನ್ನೇ ಬಲಿ ನೀಡಲು ಅವರು ಸಿದ್ಧರಾಗುತ್ತಾರೆ. ತಂದೆಯ ಕೈಯಲ್ಲಿದ್ದ ಹರಿತವಾದ ಕತ್ತಿಗೆ ತನ್ನ ಕೊರಳೊಡ್ಡಲು ಸಿದ್ಧರಾದದ್ದು ಸಾಮಾನ್ಯ ವಿಚಾರವಲ್ಲ, ಅತ್ಯದ್ಭುತವಾದದ್ದು. ಇದನ್ನು ಕುರ್‌ಆನ್ ಈ ರೀತಿ ವಿವರಿಸಿದೆ: 'ಪ್ರಭೂ ನನಗೆ ಸಜ್ಜನನಾದ (ಸಜ್ಜನರ ಸಾಲಿಗೆ ಸೇರುವ) ಒಬ್ಬ ಮಗನನ್ನು ದಯಪಾಲಿಸು.' (ಈ ಪ್ರಾರ್ಥನೆಗೆ ಉತ್ತರವಾಗಿ) ನಾವು ಅವರಿಗೆ ಒಬ್ಬ ಸಹನಶೀಲ ಪುತ್ರನ ಸುವಾರ್ತೆ ನೀಡಿದೆವು. ಆ ಬಾಲಕನು ಅವರ ಜೊತೆ ದುಡಿಯುವ ಪ್ರಾಯಕ್ಕೆ ತಲುಪಿದಾಗ (ಒಂದು ದಿನ) ಇಬ್ರಾಹೀಮರು ಅವನೊಡನೆ, 'ಮಗೂ! ನಾನು (ಬಲಿಯರ್ಪಿಸಲಿಕ್ಕಾಗಿ) ನಿನ್ನ ಕೊರಳು ಕೊಯ್ಯುತ್ತಿರುವುದನ್ನು ಕನಸಲ್ಲಿ ಕಂಡೆನು. ಈಗ ನಿನ್ನ ಅಭಿಪ್ರಾಯವೇನೆಂದು ಹೇಳು' ಎಂದರು. ಆಗ ಅವನು, 'ಅಪ್ಪಾ, ತಮಗೆ ಆಜ್ಞಾಪಿಸಲಾಗಿರುವುದನ್ನು ಮಾಡಿಬಿಡಿರಿ. ಅಲ್ಲಾಹನಿಚ್ಛಿಸಿದರೆ ತಾವು ನನ್ನನ್ನು ಸಹನೆಯುಳ್ಳವನಾಗಿ ಕಾಣುವಿರಿ' ಎಂದನು. ಕೊನೆಗೆ ಇಬ್ಬರೂ ವಿಧೇಯತೆ ಯೊಂದಿಗೆ ಶಿರಬಾಗಿದರು ಮತ್ತು ಮಗನನ್ನು ಇಬ್ರಾಹೀಮರು ಅಧೋಮುಖವಾಗಿ ಮಲಗಿಸಿದರು. ಆಗ ನಾವು ಹೀಗೆ ಕೂಗಿ ಹೇಳಿದೆವು, 'ಇಬ್ರಾಹೀಮ್, ನೀವು ನಿಮ್ಮ ಸ್ವಪ್ನವನ್ನು ಸತ್ಯಗೊಳಿಸಿದಿರಿ. ನಾವು ಪುಣ್ಯ ಕಾರ್ಯವೆಸಗುವವರಿಗೆ ಹೀಗೆಯೇ ಸತ್ಫಲ ನೀಡುತ್ತೇವೆ. ನಿಶ್ಚಯವಾಗಿಯೂ ಇದೊಂದು ಪ್ರತ್ಯಕ್ಷ ಪರೀಕ್ಷೆಯಾಗಿತ್ತು.' (ಅಸ್ಸಾಫಾತ್: 100-106)

## ಪುಣ್ಯವಂತನಾದ ಕಟುಕ

ಪುರಾತನವಾದ ಒಂದು ಕತೆ ಹೀಗಿದೆ: ಒಮ್ಮೆ ಪ್ರವಾದಿ ಮೂಸಾ(ಅ)ರು ಅಲ್ಲಾಹನೊಡನೆ, 'ಸ್ವರ್ಗದಲ್ಲಿ ನನ್ನೊಂದಿಗೆ ಜೊತೆಯಾಗಿರುವ ಮಿತ್ರನನ್ನು ಈ

ಲೋಕದಲ್ಲಿಯೇ ನನಗೆ ತೋರಿಸಿಕೊಡು.' ಆಗ ಅಲ್ಲಾಹನು ಹತ್ತಿರದ ನಗರದಲ್ಲಿರುವ ಓರ್ವ ಕಸಾಯಿಯ ಹೆಸರನ್ನು ಸೂಚಿಸಿ, 'ಆತ ನಿನ್ನೊಂದಿಗೆ ಸ್ವರ್ಗದಲ್ಲಿ ಮಿತ್ರನಾಗಿರುವನು' ಎಂದು ಹೇಳಿದನು. ಇದನ್ನು ಕೇಳಿದ ಪ್ರವಾದಿ ಮೂಸಾ(ಅ) ಸ್ವರ್ಗದಲ್ಲಿ ನನಗೆ ಜೊತೆಗಾರನಾಗಿರುವ ಮಿತ್ರ ಯಾರೆಂದು ಕುತೂಹಲದಿಂದ ಹುಡುಕುತ್ತಾ ಸಮೀಪದ ನಗರಕ್ಕೆ ತಲುಪಿದರು. ಆ ಕಸಾಯಿಯು ಮಾಂಸ ವ್ಯಾಪಾರದಲ್ಲಿ ನಿರತನಾಗಿದ್ದನು. ಸ್ವರ್ಗದಲ್ಲಿ ಆತ ನನ್ನ ಜೊತೆಗಾರನಾಗಿರಲು ಇರುವ ಅರ್ಹತೆ ಏನೆಂಬ ಬಗ್ಗೆ ಆಶ್ಚರ್ಯಗೊಂಡ ಪ್ರವಾದಿ ಮೂಸಾ(ಅ)ರು ಆ ಕಸಾಯಿಯ ಬಳಿಯಲ್ಲಿದ್ದುಕೊಂಡು ಅವರ ವ್ಯಾಪಾರವನ್ನೆಲ್ಲಾ ಬಹಳ ಸೂಕ್ಷ್ಮವಾಗಿ ಗಮನಿಸಿದರು. ಆದರೆ ಆ ಮಾಂಸ ವ್ಯಾಪಾರಿಯಲ್ಲಿ ಯಾವುದೇ ರೀತಿಯ ವಿಶೇಷತೆ ಕಂಡು ಬರಲಿಲ್ಲ.

ಸಂಜೆ ಆ ಕಸಾಯಿಯು ಪ್ರವಾದಿ ಮೂಸಾ(ಅ)ರನ್ನು ಮನೆಗೆ ಆಹ್ವಾನಿಸಿದನು. ಅವರ ಆತಿಥ್ಯವನ್ನು ಸ್ವೀಕರಿಸಿದ ಪ್ರವಾದಿ ಮೂಸಾ(ಅ) ಅವರ ಮನೆಗೆ ಹೊರಟರು. ಕಸಾಯಿಯು ಮಾಂಸವನ್ನು ತುಂಡು ತುಂಡು ಮಾಡಿದನು. ಬಳಿಕ ಅದರಿಂದ ಪೇಯವನ್ನು ತಯಾರಿಸಿದನು. ತಾನು ಅತ್ಯಂತ ಹೆಚ್ಚು ಪ್ರೀತಿಸುವ ರೋಗಪೀಡಿತರಾದ ವಯೋವೃದ್ಧ ಮಾತೆಗೆ ಪ್ರೀತಿ ವಾತ್ಸಲ್ಯದಿಂದ ಕುಡಿಯಲು ನೀಡಿದನು. ಬಳಿಕ ಅವರ ಬಟ್ಟೆಗಳನ್ನು ಒಗೆದು ಶುಚಿಗೊಳಿಸಿದನು. ಇವೆಲ್ಲವನ್ನೂ ತದೇಕ ಚಿತ್ತದಿಂದ ನೋಡುತ್ತಿದ್ದ ಪ್ರವಾದಿ ಮೂಸಾ(ಅ)ರು ಆ ಮಾತೆಯ ಮುಖದಲ್ಲಿರುವ ಸಂತೋಷ ಮತ್ತು ಸಂತೃಪ್ತಿಯನ್ನು ಗಮನಿಸಿದರು. ಅವರ ತುಟಿಗಳು ಅದುರುತ್ತಿದ್ದುವು. ಅದು ಹೃದಯಾಂತರಾಳದಿಂದ ಹೊರ ಬಂದ ಪ್ರಾರ್ಥನೆಯಾಗಿತ್ತು. 'ಅಲ್ಲಾಹನೇ ನನ್ನ ಈ ಪುತ್ರನನನ್ನು ನೀನು ಸ್ವರ್ಗದಲ್ಲಿ ಪ್ರವೇಶಗೊಳಿಸು! ಪ್ರವಾದಿ ಮೂಸಾರ ಸನಿಹ ದಲ್ಲಿರಲು ಅನುಗ್ರಹಿಸು!' ಅವರು ಯಾರೆಂದು ಕೇಳಿದಾಗ, 'ಇವರು ವಾರ್ಧಕ್ಯ ಪೀಡಿತರಾಗಿದ್ದು, ಎದ್ದು ನಿಲ್ಲಲೂ ನಡೆಯಲೂ ಆಗದ ನನ್ನ ತಾಯಿ' ಎಂದು ಹೇಳಿದರು. ಆಗ ಪ್ರವಾದಿ ಮೂಸಾ(ಅ) ಹೇಳಿದರು, 'ನಾನು ಪ್ರವಾದಿ ಮೂಸಾ ಆಗಿದ್ದೇನೆ. ನಿಮ್ಮ ಮೇಲೆ ಅಲ್ಲಾಹನ ಅನುಗ್ರಹವಿರಲಿ. ಅವನು ನಿಮಗೆ ಸ್ವರ್ಗದಲ್ಲಿ ಉನ್ನತ ಸ್ಥಾನ ಅನುಗ್ರಹಿಸಿರುವನು. ಖಂಡಿತವಾಗಿಯೂ ನೀವು ಸ್ವರ್ಗದಲ್ಲಿ ನನ್ನ ಸಂಗಾತಿ ಯಾಗಿರುವಿರಿ.'

## ಮಾತೃಸ್ನೇಹ ರಕ್ಷಣಾ ಕವಚವಾದಾಗ

ಪ್ರವಾದಿವರ್ಯರು(ಸ) ಹೇಳಿದ್ದ, ಅಬ್ದುಲ್ಲಾ ಬಿನ್ ಉಮರ್(ರ) ಉದ್ಧರಿಸಿದ ಒಂದು ಘಟನೆಯು ಸುಪ್ರಸಿದ್ಧವಾಗಿದೆ: ಮೂವರು ಮಿತ್ರರು ಒಂದು ಕಣಿವೆಯಲ್ಲಿ

ಸಂಚರಿಸುತ್ತಿದ್ದರು. ಅನಿರೀಕ್ಷಿತವಾಗಿ ಭಾರೀ ಮಳೆ ಸುರಿಯತೊಡಗಿತು. ಅವರು ಹತ್ತಿರವಿದ್ದ ಗುಹೆಯೊಂದರಲ್ಲಿ ಆಶ್ರಯ ಪಡೆದರು. ಜಡಿಮಳೆಯಿಂದಾಗಿ ಭೂ ಕುಸಿತವುಂಟಾಗಿ ಒಂದು ದೊಡ್ಡ ಬಂಡೆಯು ಉರುಳಿ ಗುಹೆಗೆ ಅಡ್ಡಲಾಗಿ ಬಂದು ಬಿತ್ತು. ಅಲ್ಲಿಂದ ಪಾರಾಗಲು ಅಲ್ಲಾಹನ ಸಹಾಯವಲ್ಲದೆ ಅನ್ಯ ದಾರಿಯಿಲ್ಲವೆಂದರಿತ ಆ ಮೂವರೂ ತಾವು ಮಾಡಿದ ಅತಿ ಶ್ರೇಷ್ಠ ಕರ್ಮವನ್ನು ಸ್ಮರಿಸಿ ಅಲ್ಲಾಹನಲ್ಲಿ ಹೇಳಿ ಮೊರೆಯಿಟ್ಟರು.

ಅವರಲ್ಲೋರ್ವನು ನನಗೆ ವಯೋವೃದ್ಧರಾದ ತಂದೆ ತಾಯಂದಿರಿದ್ದರು. ಅವರಿಬ್ಬರಿಗೂ ಆಹಾರ ನೀಡದೆ ನಾನಾಗಲಿ, ನನ್ನ ಪತ್ನಿ ಮಕ್ಕಳಾಗಲಿ ಆಹಾರ ಸೇವಿಸುತ್ತಿರಲಿಲ್ಲ. ಮನೆ ಸೇವಕಿಗೂ ಆಹಾರ ನೀಡುತ್ತಿರಲಿಲ್ಲ. ಒಂದು ದಿನ ಹುಲ್ಲು ಮತ್ತು ಕಟ್ಟಿಗೆಯನ್ನು ಹುಡುಕುತ್ತಾ ತುಂಬಾ ದೂರ ಹೋಗಬೇಕಾಗಿ ಬಂತು. ಮರಳಿ ಬರುವಾಗ ಮಾತಾಪಿತರಿಬ್ಬರೂ ಮಲಗಿ ನಿದ್ರಿಸಿದ್ದರು. ಹಾಲು ಕರೆದು ತಂದೆ ತಾಯಿಯ ಬಳಿ ಬಂದಾಗ ಅವರು ಗಾಢ ನಿದ್ರೆಯಲ್ಲಿದ್ದರು. ಆದರೆ ಅವರನ್ನು ಕರೆದು ಅವರ ನಿದ್ರೆಗೆ ಭಂಗ ತರಲು ಇಷ್ಟವಾಗಲಿಲ್ಲ. ಅವರಿಗೆ ಹಾಲು ಕುಡಿಸದೆ ಮಕ್ಕಳಿಗೆ ಹಾಲು ನೀಡಲು ನನ್ನ ಮನಸ್ಸು ಒಪ್ಪಲಿಲ್ಲ. ಆದಕ್ಕಾಗಿ ಅವರು ಎಚ್ಚರಗೊಳ್ಳುವ ತನಕ ಹಾಲಿನ ತಂಬಿಗೆ ಹಿಡಿದು ಅಲ್ಲೇ ಕಾದು ನಿಂತೆನು. ಹೀಗೇ ತುಂಬಾ ಸಮಯ ನಿಂತೆನು. ಮಕ್ಕಳು ಹಾಲಿಗಾಗಿ ಅಳತೊಡಗಿದರು. ತಂದೆ ತಾಯಿ ಈರ್ವರೂ ಎಚ್ಚರಗೊಂಡು ಹಾಲು ಕುಡಿದ ನಂತರವೇ ನಾನು, ಪತ್ನಿ ಮಕ್ಕಳು ಹಾಲು ಕುಡಿದೆವು. ನಾನು ಈ ಎಲ್ಲಾ ಕರ್ಮವನ್ನೂ ತಂದೆ ತಾಯಿಯ ಮೇಲೆ ನನಗಿದ್ದ ಗೌರವಾದರದಿಂದ ಮಾಡಿದ್ದೆ. ಅಲ್ಲಾಹನೇ ನಿನ್ನ ಸಂಪ್ರೀತಿಗಳಿಸಲು ನಾನು ಈ ಕರ್ಮ ಮಾಡಿದ್ದೆಂದಾದರೆ ಈ ಬಂಡೆಯನ್ನು ಸರಿಸಿ ನಮ್ಮನ್ನು ಈ ಅವಘಡದಿಂದ ಕಾಪಾಡು. ನಿಷ್ಕಳಂಕವಾದ ಆ ಪ್ರಾರ್ಥನೆಯಿಂದ ಬಂಡೆಯು ಸ್ವಲ್ಪ ಸರಿಯಿತು. ಆದರೆ ಅವರಿಗೆ ಅದರಿಂದ ಹೊರ ಬರಲಾಗುತ್ತಿರಲಿಲ್ಲ.

ಎರಡನೆಯ ವ್ಯಕ್ತಿ ಹೇಳಿದನು: ನನ್ನ ಮನೆಯ ಬಳಿ ಪಿತೃಸಂಬಂಧಿ ಯುವತಿಯೊಬ್ಬಳಿದ್ದಳು. ಅವಳನ್ನು ನಾನು ತುಂಬಾ ಪ್ರೀತಿಸಿದ್ದೆ. ಆಕೆಯೊಂದಿಗೆ ನನ್ನ ಆಸೆಯನ್ನು ಪೂರೈಸಲು ಬಯಸಿದ್ದೆ. ಆದರೆ ಆಕೆ ತಪ್ಪಿಸಿಕೊಳ್ಳುತ್ತಿದ್ದಳು. ಒಮ್ಮೆ ನಮ್ಮ ಊರಲ್ಲಿ ದೊಡ್ಡ ಬರಗಾಲ ಬಂದಿತ್ತು. ಅವಳು ಆರ್ಥಿಕ ಸಹಾಯಕ್ಕಾಗಿ ನನ್ನ ಬಳಿ ಬಂದಳು. ನೀನು ನನ್ನೊಂದಿಗೆ ಸಹಕರಿಸಿದರೆ ನಾನು ನಿನಗೆ ನೆರವಾಗುವೆನೆಂಬ ನಿಬಂಧನೆಯನ್ನು ಅವಳ ಮುಂದಿಟ್ಟು ನೂರಿಪ್ಪತ್ತು ಪವನ್ ಚಿನ್ನ ನೀಡಿದೆ. ಅವಳೊಂದಿಗೆ ಅನೈತಿಕ ಸಂಪರ್ಕಕ್ಕೆ ಯತ್ನಿಸಿದಾಗ ಆಕೆ, 'ಅಲ್ಲಾಹನನ್ನು ಭಯಪಡು. ಅನರ್ಹವಾದುದನ್ನು ನನ್ನಿಂದ ಕಸಿದು

ಅಲ್ಲಾಹನ ಶಿಕ್ಷೆಗೆ ಗುರಿಯಾಗಲು ಅವಕಾಶ ನೀಡಬಾರದು' ಎಂದು ಎಚ್ಚರಿಸಿದಳು.

ತಕ್ಷಣ ಅಲ್ಲಾಹನನ್ನು ಸ್ಮರಿಸಿ ನಾನು ಆ ಕೃತ್ಯದಿಂದ ಹಿಂದೆ ಸರಿದೆನು. ಆದರೆ ನಾನು ಆಕೆಯನ್ನು ತುಂಬಾ ಇಷ್ಟ ಪಟ್ಟಿದ್ದೆ. ಆಕೆಯಿಂದ ನಾನು ಚಿನ್ನವನ್ನು ಮರಳಿ ಪಡೆಯಲಿಲ್ಲ. ಅಲ್ಲಾಹನೇ ನಾನು ನಿನ್ನ ಸಂಪ್ರೀತಿ ಬಯಸಿ ಹಾಗೆ ಮಾಡಿದೆನು ಎಂದಾದರೆ ನಮ್ಮನ್ನು ಈ ಸಂಕಷ್ಟದಿಂದ ಪಾರು ಮಾಡು ಎಂದು ಪ್ರಾರ್ಥಿಸಿದನು. ಇದರೊಂದಿಗೆ ಆ ಬಂಡೆ ಕಲ್ಲು ಇನ್ನೂ ಸ್ವಲ್ಪ ಸರಿಯಿತು. ಆದರೆ ಅವರಿಗೆ ಅಲ್ಲಿಂದ ಹೊರ ಬರಲು ಸಾಧ್ಯವಾಗುತ್ತಿರಲಿಲ್ಲ.

ಮೂರನೆಯವನು ಪ್ರಾರ್ಥಿಸತೊಡಗಿದನು: ಅಲ್ಲಾಹನೇ ನಾನು ಕೆಲವು ಕಾರ್ಮಿಕರನ್ನು ಕೂಲಿ ಕೆಲಸಕ್ಕಾಗಿ ಕರೆದಿದ್ದೆ. ಎಲ್ಲರಿಗೂ ಅವರ ವೇತನ ನೀಡಿ ಕಳುಹಿಸಿದ್ದೆ. ಆದರೆ ಅವರಲ್ಲಿ ಓರ್ವನು ವೇತನ ಪಡೆಯದೆ ಅಲ್ಲಿಂದ ತೆರಳಿದ್ದನು. ನಾನು ಆತನ ಕೂಲಿಯ ಮೊತ್ತವನ್ನು ಪ್ರತ್ಯೇಕವಾದ ವ್ಯಾಪಾರಕ್ಕಾಗಿ ವ್ಯಯಿಸಿದೆ. ಹಾಗೆಯೇ ಆ ವ್ಯಾಪಾರ ವೃದ್ಧಿಯಾಗಿ ಬೆಳೆಯಿತು. ದೊಡ್ಡ ಮೊತ್ತದ ವರಮಾನ ಬರತೊಡಗಿತು. ಅನೇಕ ವರ್ಷಗಳ ಬಳಿಕ ಆ ವ್ಯಕ್ತಿ ಮರಳಿ ಬಂದು ತನ್ನ ಹಳೆಯ ವೇತನವನ್ನು ಕೇಳಿದರು. ಅದಕ್ಕೆ ನಾನು 'ನೋಡಿ ಈ ಕಾಣುತ್ತಿರುವ ಆಡುಗಳು, ಜಾನುವಾರುಗಳು, ಒಂಟೆಗಳು ಎಲ್ಲವೂ ನಿಮ್ಮದಾಗಿದೆ. ಅವೆಲ್ಲವನ್ನೂ ತಾವು ಪಡೆದುಕೊಂಡು ಹೋಗಿರಿ' ಎಂದು ಹೇಳಿದೆ.

ಅದಕ್ಕೆ ಅವರು, 'ನೀವು ಹೀಗೆ ನನ್ನನ್ನು ಅಪಹಾಸ್ಯ ಮಾಡಬೇಡಿರಿ. ನಾನು ನನ್ನ ವೇತನ ಮಾತ್ರ ಪಡೆಯಲು ಬಂದಿರುವೆನು' ಎಂದರು. 'ನೋಡಿ ತಾವು ಪಡೆಯದೆ ಹೋದ ನಿಮ್ಮ ವೇತನವನ್ನು ನಾನು ಪ್ರತ್ಯೇಕ ವ್ಯಾಪಾರಕ್ಕಾಗಿ ತೊಡಗಿಸಿಕೊಂಡೆನು. ಅದು ವೃದ್ಧಿ ಯಾಗಿ ಬೃಹತ್ ವ್ಯಾಪಾರವಾಯಿತು. ಇವೆಲ್ಲವೂ ನಿಮ್ಮ ಆ ವೇತನದ ಹಣದಿಂದ ಆದುದಾಗಿದೆ. ನೀವು ಎಲ್ಲವನ್ನೂ ಪಡೆದುಕೊಳ್ಳಿರಿ' ಎಂದು ನಾನು ಹೇಳಿದೆ. ಅವರು ಆ ಸೊತ್ತುಗಳೆಲ್ಲವನ್ನೂ ಪಡೆದುಕೊಂಡು ಹೋದರು. ಅಲ್ಲಾಹನೇ ನಾನು ಮಾಡಿದ ಈ ಕರ್ಮವು ನೀನು ಇಷ್ಟಪಡುತ್ತಿ ಎಂದಾದರೆ ನಮ್ಮನ್ನು ಈ ಸಂಕಷ್ಟದಿಂದ ಪಾರುಗೊಳಿಸಿ ಕಾಪಾಡು.

ಅದರೊಂದಿಗೆ ಗುಹೆಗೆ ಅಡ್ಡಲಾಗಿದ್ದ ಬಂಡೆಯು ಸಂಪೂರ್ಣ ಸರಿಯಿತು. ಹೀಗೇ ಮೂವರೂ ಆ ಅವಘಡದಿಂದ ಪಾರಾದರು. ಆದ್ದರಿಂದ ತಂದೆ ತಾಯಿಯರನ್ನು ಪರಿಪಾಲನೆ ಮಾಡಿ ಸಂರಕ್ಷಿಸುವುದು ವ್ಯಭಿಚಾರದಿಂದ ದೂರ ನಿಲ್ಲುವುದಕ್ಕಿಂತಲೂ ಸಂಪತ್ತಿನಲ್ಲಿ ಪ್ರಾಮಾಣಿಕತೆ ಪಾವಿತ್ರ್ಯತೆಗಿಂತಲೂ ಶ್ರೇಷ್ಠವಾದುದು ಎಂಬುದನ್ನು ಈ

ಕತೆಯಿಂದ ಅರ್ಥೈಸಬಹುದಾಗಿದೆ. ಜೊತೆಗೆ ಇಹಲೋಕದ ಜೀವನದಲ್ಲಿಯೂ ಅದರ ಪ್ರತಿಫಲ ಸ್ವಲ್ಪವಾದರೂ ಅನುಭವಿಸಲು ಸಾಧ್ಯವೆಂಬ ಪಾಠವನ್ನೂ ಇದು ಕಲಿಸುತ್ತದೆ.

## ಜುರೈಜ್‌ರ ಕತೆ

ಜುರೈಜ್ ಅಲ್ಲಾಹನ ಸದ್ಭಕ್ತರಾಗಿದ್ದರು. ಅವರು ಸದಾ ಪ್ರಾರ್ಥನೆ ಕೀರ್ತನೆಗಳಲ್ಲಿ ನಿರತರಾಗಿದ್ದ ಮಹಾನ್ ಧರ್ಮಭಕ್ತರಾಗಿದ್ದರು. ಒಮ್ಮೆ ಅವರು ಪ್ರಾರ್ಥನಾ ನಿರತನಾಗಿದ್ದಾಗ ಅವರ ತಾಯಿಯು ಅವರನ್ನು ಮೂರು ಬಾರಿ ಕರೆದರು. ಆದರೆ ಅವರು ಅದಕ್ಕೆ ಉತ್ತರಿಸದೆ ಪ್ರಾರ್ಥನೆಯಲ್ಲಿಯೇ ಮುಳುಗಿದ್ದರು. ಇದರಿಂದ ನಿರಾಶರಾದ ಆ ಮಾತೆಯು ಅವರಿಗೆ ವೇಶ್ಯೆಯ ಮುಖ ನೋಡದೆ ಸಾಯಬಾರದೆಂದು ಶಾಪ ಹಾಕಿ ಹೋದರು.

ಜುರೈಜ್‌ರವರು ತಮ್ಮ ಕುಟೀರದಲ್ಲಿ ಪ್ರಾರ್ಥನಾನಿರತರಾಗಿದ್ದಾಗ ಓರ್ವ ಯುವತಿಗೆ ಅವರ ಮೇಲೆ ಅನುರಾಗ ಮೂಡಿತು. ಆಕೆ ಅವರನ್ನು ವಶೀಕರಿಸಲು ಹಲವು ಬಾರಿ ಶ್ರಮಿಸಿ ವಿಫಲಳಾದಳು. ಒಮ್ಮೆ ಆ ಪ್ರಾರ್ಥನಾ ಕೇಂದ್ರದಲ್ಲಿ ಯಾರೂ ಇಲ್ಲವೆಂದು ಖಚಿತವಾದಾಗ ಆಕೆ ಅವರ ಬಳಿ ತೆರಳಿ ನನ್ನ ಆಸೆ ಪೂರೈಸಬೇಕೆಂದು ವಿನಂತಿಸಿದಳು. ಆದರೆ ಜುರೈಜ್ ಅದಕ್ಕೂ ಮಣಿಯಲಿಲ್ಲ.

ಅವಮಾನಿತಳಾದ ಆಕೆ ಹೇಗಾದರೂ ಮಾಡಿ ಅವರನ್ನು ಅಪಮಾನಿಸಿ ಪ್ರತೀಕಾರ ಪಡೆಯಬೇಕೆಂದು ನಿರ್ಧರಿಸಿದಳು. ಆಕೆ ಓರ್ವ ಆಡು ಮೇಯಿಸುವ ಗುಲಾಮನ ಜೊತೆ ಸಂಪರ್ಕವಿರಿಸಿದಳು. ಆತನಿಂದ ಗರ್ಭವತಿಯಾದಳು. ಹೆರಿಗೆಯಾದ ಕೂಡಲೇ 'ಇದು ಜುರೈಜ್‌ನ ಮಗು' ಎಂದು ಅಲ್ಲಿದ್ದವರೆಲ್ಲರೊಡನೆ ಹೇಳತೊಡಗಿದಳು. ಇದನ್ನು ಕೇಳಿದ ಗ್ರಾಮೀಣರು ಕೋಪಾವಿಷ್ಟರಾದರು. ಜುರೈಜ್ ಮಹಾವಂಚಕ, ಈ ಭಯಭಕ್ತಿ ಎಲ್ಲವೂ ಕಾಪಟ್ಯದಿಂದ ಕೂಡಿದೆ ಎಂದು ಊರವರೆಲ್ಲರೂ ಜರೆದರು. ಎಲ್ಲರೂ ಸೇರಿ ಅವರನ್ನು ಪ್ರಾರ್ಥನಾ ಕೇಂದ್ರದಿಂದ ಹೊರಹಾಕಿ ಅವರ ಪ್ರಾರ್ಥನಾ ಕೇಂದ್ರವನ್ನು ಧ್ವಂಸಮಾಡಿದರು.

ಕೂಡಲೇ ಜುರೈಜ್ ಅವರೆಲ್ಲರನ್ನೂ ಸೇರಿಸಿಕೊಂಡು ಆ ಯುವತಿಯ ಮನೆಯತ್ತ ತೆರಳಿದರು. ಆ ಹಸುಗೂಸಿನೊಂದಿಗೆ, 'ನಿನ್ನ ತಂದೆ ಯಾರು?' ಎಂದು ಕೇಳಿದರು. ಆ ಹಸುಗೂಸು ನನ್ನ ತಂದೆ ಆಡು ಮೇಯಸುವವನೆಂದು ಹೇಳಿತು. ಇದನ್ನು ಕೇಳಿದ ಜನರು ನಿಬ್ಬೆರಗಾದರು. ಅವರು ತಾವು ಮಾಡಿದ ಕೃತ್ಯದಿಂದ ಖೇದಗೊಂಡು ತೀವ್ರ

ದುಃಖಿತರಾದರು. ಅವರ ಸುತ್ತ ಮುತ್ತಲೂ ಸೇರಿದವರು, 'ವಿದ್ವಾಂಸರೇ ನಮ್ಮನ್ನು ಕ್ಷಮಿಸಿರಿ. ತಮಗೆ ಚಿನ್ನದಿಂದ ಪ್ರಾರ್ಥನಾ ಮಂದಿರ ನಿರ್ಮಿಸಿಕೊಡುವೆವು' ಎಂದು ಹೇಳಿದರು. ಆಗ ಜುರೈಜ್ 'ಬೇಡ, ನನಗೆ ಆ ಹಳೆಯ ಪ್ರಾರ್ಥನಾ ಮಂದಿರ ನಿರ್ಮಿಸಿಕೊಟ್ಟರೆ ಸಾಕು' ಎಂದು ಹೇಳಿದರು.

ಈ ಘಟನೆಯನ್ನು ಉದ್ಧರಿಸುತ್ತಾ ಪ್ರವಾದಿವರ್ಯರು(ಸ), 'ಜುರೈಜ್ ಅತ್ಯುತ್ತಮ ವಿದ್ವಾಂಸರಾಗಿದ್ದಿದ್ದರೆ ತನ್ನ ಮಾತೆಯ ಕರೆಗೆ ಓಗೊಟ್ಟು ಪ್ರತಿಕ್ರಿಯಿಸುವುದು ಪ್ರಾರ್ಥನಾ ನಿರತನಾಗಿರುವುದಕ್ಕಿಂತ ಶ್ರೇಷ್ಠ ಎಂಬುದನ್ನು ಅರಿತಿರುತ್ತಿದ್ದರು' ಎಂದರು. ಐಚ್ಛಿಕವಾದ ನಮಾಝ್‌ನಲ್ಲಿ ನಿರತನಾಗಿದ್ದಾಗಲೂ ಮಾತೆಯು ಅಗತ್ಯದ ಸಂದರ್ಭದಲ್ಲಿ ಕರೆದರೆ ಉತ್ತರ ನೀಡಬೇಕೆಂದು ಕರ್ಮಶಾಸ್ತ್ರ ವಿದ್ವಾಂಸರು ಈ ಘಟನೆಯನ್ನು ಆಧರಿಸಿ ಅಭಿಪ್ರಾಯಪಟ್ಟಿದ್ದಾರೆ.

## ಹಸನುಲ್ ಸಅದಿ

ಹಸನುಲ್ ಸಅದಿ ಎಂಬ ಸೂಫೀವರ್ಯರ ಬದುಕಿನಲ್ಲಿಯೂ ಇಂತಹದೇ ಘಟನೆ ನಡೆದಿದೆ. ಅವರು ಕೂಡಾ ಹಲವಾರು ಅನುಯಾಯಿಗಳನ್ನು ಹೊಂದಿದ್ದು ಅತ್ಯಂತ ಗೌರವಾದರವುಳ್ಳ ಸಂತರಾಗಿದ್ದರು. ಅವರು ಒಮ್ಮೆ ಪ್ರಾರ್ಥನಾ ನಿರತರಾಗಿದ್ದಾಗ ಬಹಳ ದೂರದಿಂದ ಅವರ ಮಾತೆಯು ಅವರನ್ನು ಭೇಟಿಯಾಗಲು ಬಂದಿದ್ದರು. ಅದನ್ನು ಹಸನುಲ್ ಸಅದಿಯವರು ಗಮನಿಸಿರಲಿಲ್ಲ, ಅದಕ್ಕಾಗಿ ಅವರ ತಾಯಿ: ಅಲ್ಲಾಹನೇ ನನ್ನ ಮಗನು ತೀವ್ರ ದೊಡ್ಡಸ್ತಿಕೆ ತೋರಿಸುತ್ತಿದ್ದಾನೆ. ಸ್ವಲ್ಪ ಹೆಸರು ಕೀರ್ತಿ ಬಂದ ಕೂಡಲೇ ಆತ ನನ್ನನ್ನು ತಿರುಗಿ ನೋಡುತ್ತಿಲ್ಲ, ಆದ್ದರಿಂದ ಆತನನನ್ನು ಗೌರವಿಸುವವ ರಿಂದಲೇ ಆತ ಏಟು ತಿನ್ನುವಂತಾಗಲಿ ಎಂದು ಪ್ರಾರ್ಥಿಸಿದರು.

ಜುರೈಜ್‌ರವರ ಬದುಕಿನಲ್ಲಿ ನಡೆದಂತೆ ಅವರ ಮೇಲೆಯೂ ಓರ್ವ ವೇಶ್ಯೆ ಸುಳ್ಳಾರೋಪ ಹೊರಿಸಿದಳು. ತನ್ನ ಅಕ್ರಮ ಸಂತಾನಕ್ಕೆ ಈತನೇ ಪಿತನೆಂದು ಹೇಳಿಕೊಂಡು ನಡೆದಳು. ಅವರ ಅನುಯಾಯಿಗಳು ಈ ಸುಳ್ಳಾರೋಪವನ್ನು ನಂಬಿದರು. ಅವರು ಹಸನುಲ್ ಸಅದಿಯವರನ್ನು ಹಿಡಿದು ಹಲ್ಲೆಗೈದರು. ಬಳಿಕ ಅವರ ನಿರಪರಾಧಿತ್ವ ಬಹಿರಂಗವಾಯಿತು.

ವಯೋವೃದ್ಧರಾದ ತಂದೆ ತಾಯಿ ಅಥವಾ ಅವರಲ್ಲಿ ಯಾರಾದರೊಬ್ಬರ ಸೇವೆಗೈಯಲು ಯಾರೂ ಇಲ್ಲದಿದ್ದಾಗ ಹಜ್ಜ್‌ಗೆ ಹೋಗಲು ಕೂಡಾ ಅನುಮತಿಯಿಲ್ಲ ಎಂದು ಈ ಘಟನೆಯನ್ನು ಉದ್ಧರಿಸಿದ ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ.

## ಕಣ್ಣಾಲಿಗಳು ತುಂಬಿಸಿದ ನೆನಪುಗಳು

ಉಮ್ರಾ ನಿರ್ವಹಿಸುವ ಉದ್ದೇಶದಿಂದ ಪ್ರವಾದಿವರ್ಯರು(ಸ) ಮದೀನಾದಿಂದ ಮಕ್ಕಾದತ್ತ ಹೊರಟರು. ಜೊತೆಯಲ್ಲಿ ಸಾವಿರದ ನಾಲ್ಕು ನೂರು ಅನುಯಾಯಿಗಳಿದ್ದರು. ಮದೀನಾದ ಉತ್ತರ ಭಾಗದಿಂದ ಪ್ರಯಾಣ ಮಾಡಬೇಕಾಗಿತ್ತು. ಇನ್ನೂರರಷ್ಟು ಕಿಲೋ ಮೀಟರ್ ಪ್ರಯಾಣ ಕಳೆದಾಗ ಅಬ್‌ವಾ ಎಂಬ ಸ್ಥಳವನ್ನು ತಲುಪಿದಾಗ ಸ್ವಲ್ಪ ಸಮಯ ಅಲ್ಲಿ ತಂಗಲು ಪ್ರವಾದಿವರ್ಯರು(ಸ) ತನ್ನ ಅನುಯಾಯಿಗಳಲ್ಲಿ ಅನುಮತಿ ಕೇಳಿದರು. ಅವರು ಸಂತೋಷದಿಂದ ಪ್ರವಾದಿವರ್ಯರ(ಸ) ಅನುಮತಿಯನ್ನು ಸ್ವೀಕರಿಸಿದರು. ಅಲ್ಲಿಂದ ತುಸು ಹತ್ತಿರದಲ್ಲಿದ್ದ ಬೆಟ್ಟದಲ್ಲಿ ಒಂದು ಗಂಟೆಗಳ ಕಾಲ ತಂಗಿದರು. ಅಲ್ಲಿ ಪ್ರವಾದಿವರ್ಯರ(ಸ) ಮಾತೆಯ ಕಬರ್(ಗೋರಿ) ಇತ್ತು.

ಆಗ ಪ್ರವಾದಿವರ್ಯರ(ಸ) ಸ್ಮರಣೆಗಳು ಕೆಲ ದಶಕಗಳ ಹಿಂದೆ ಸಾಗಿತ್ತು. ತಾಯಿಯೊಂದಿಗಿನ ಪ್ರಯಾಣದ ನೆನಪುಗಳು ಪ್ರವಾದಿವರ್ಯರ(ಸ) ಹೃದಯದಲ್ಲಿ ಮರುಕಳಿಸಿತು. ತಾನು ಆರನೆಯ ವರ್ಷದಲ್ಲಿದ್ದಾಗ ತಾಯಿಯು ತಂದೆಯ ಗೋರಿ ಸಂದರ್ಶನಕ್ಕೆ ಕರೆದುಕೊಂಡು ಹೋಗಿದ್ದರು. ಆಗ ಅವರು ಮದೀನಾದ ಬನೂ ಅಬ್ದಿ ಬಿನ್ ಅಮ್ರ್ ಕುಟುಂಬದ ಸದಸ್ಯರ ಜೊತೆ ತಂಗಿದ್ದರು.

ಮಗು ಗರ್ಭಾಶಯದಲ್ಲಿರುವಾಗಲೇ ಪ್ರವಾದಿವರ್ಯರ(ಸ) ತಂದೆ ಅಬ್ದುಲ್ಲಾ ಇಹಲೋಕ ತ್ಯಜಿಸಿದ್ದರು. ಅಬ್ದುಲ್ಲಾ ಮತ್ತು ಆಮಿನಾರವರ ದಾಂಪತ್ಯ ಜೀವನ ಕೆಲ ಕಾಲ ಮಾತ್ರವಿತ್ತು. ಅಷ್ಟರಲ್ಲಿ ಅಲ್ಲಾಹನು ಅವರನ್ನು ತನ್ನತ್ತ ಆಹ್ವಾನಿಸಿದ್ದನು. ಅದರಂತೆ ಆಮಿನಾರವರು ಹದಿನೆಂಟರ ಹರೆಯದ ಯುವತಿಯಾಗಿರುವಾಗಲೇ ವಿಧವೆಯಾಗಿದ್ದರು. ವ್ಯಾಪಾರಕ್ಕಾಗಿ ಸಿರಿಯಾಗೆ ಹೋಗಿದ್ದಾಗ ದಾರಿ ಮಧ್ಯೆ, ಮದೀನಾದಲ್ಲಿ ಮಾರಕವಾದ ಕಾಯಿಲೆಗೆ ಅವರು ತುತ್ತಾಗಿ ಇಹಲೋಕ ತ್ಯಜಿಸಿದರು. ಆಗ ಅವರಿಗೆ ಇಪ್ಪತ್ತೈದರ ಹರೆಯವಾಗಿತ್ತು.

ಹುಟ್ಟುವಾಗಲೇ ತಂದೆಯನ್ನು ಕಳೆದುಕೊಂಡ ಕಾರಣ ಪ್ರವಾದಿವರ್ಯರು(ಸ) ಅನಾಥರಾಗಿಯೇ ಹುಟ್ಟಿದರು. ಆದ್ದರಿಂದ ತಾಯಿ ಆಮಿನಾ ಅತೀವ ಪ್ರೀತಿ ವಾತ್ಸಲ್ಯ ದಿಂದ ಹೆತ್ತ ಮಗನನ್ನು ಬೆಳೆಸಿದ್ದರು. ಕೆಲವೇ ತಿಂಗಳು ಎದೆಹಾಲುಣಿಸಿದ್ದರು. ಆ ಕಾಲದ ಸಂಪ್ರದಾಯದನುಸಾರ ಹಲೀಮಾರವರಿಗೆ ಮಗುವನ್ನು ಎದೆಹಾಲುಣಿಸಲು ನೀಡಿದ್ದರು. ಎರಡು ವರ್ಷ ಕಳೆದ ಬಳಿಕ ತಾಯಿಗೆ ಮಗು ಮರಳಿಸಿದ್ದರು. ಆಗ ಆಮಿನಾರವರಿಗೆ ಇಪ್ಪತ್ತರ ಹರೆಯ. ತಂದೆಯ ಅಗಲಿಕೆಯ ಯಾವುದೇ ನೋವು

ಅರಿಯದಂತೆ ನಾಲ್ಕು ವರ್ಷ ಪೋಷಿಸಿದರು. ಪ್ರವಾದಿವರ್ಯರಿಗೆ ಆರು ವಯಸ್ಸು ತುಂಬಿದಾಗ ತಂದೆಯ ಗೋರಿಯನ್ನು ತೋರಿಸಲು ತಾಯಿ ಆಮಿನಾ ಮಗನನ್ನು ಕರೆದು ಕೊಂಡು ಮದೀನಾದತ್ತ ತೆರಳಿದ್ದರು. ಅಲ್ಲಿದ್ದ ದಿನಗಳಲ್ಲಿ ಮಾತೆ ಆಮಿನಾ ಪ್ರತೀ ದಿನವೂ ಮಗನನ್ನು ಪತಿಯ ಗೋರಿಯ ಬಳಿಗೆ ಕರೆದುಕೊಂಡು ಹೋಗುತ್ತಿದ್ದರು. ತನ್ನ ಪ್ರಿಯ ಮಾತೆಯೊಂದಿಗೆ ಹೋದ ಆ ಬಾಲಕ ಮುಹಮ್ಮದ್, ತಾಯಿಗೆ ತನ್ನ ತಂದೆಯ ಮೇಲಿರುವ ಆತ್ಮ ಬಂಧನವನ್ನು ನೋಡಿ ಅನುಭವಿಸುತ್ತಿದ್ದರು.

ತಂದೆಯ ಗೋರಿ ಸಂದರ್ಶನ ಮಾಡಿ ಹಿಂತೆರಳುವಾಗ ಅಬ್‌ವಾದಲ್ಲಿ ತಾಯಿ ಆಮಿನಾ ಇಹಲೋಕ ತ್ಯಜಿಸುತ್ತಾರೆ. ಆಗ ಬಾಲಕ ಮುಹಮ್ಮದ್‌ರ ಜೊತೆಗೆ ತಾಯಿಯ ಪರಿಚಾರಕಿ ಉಮ್ಮು ಐಮನ್ ಮಾತ್ರ ಜೊತೆಗಿದ್ದರು. ಮಾತೆ ಆಮಿನಾ ಮರಣಾಸನ್ನರಾಗಿರುವಾಗ ಹೇಳಿದ ಮಾತುಗಳು ಪ್ರವಾದಿವರ್ಯರ(ಸ) ಮನದಲ್ಲಿ ತೇಲಿ ಬಂತು. 'ಪ್ರಿಯ ಪುತ್ರ ನಿನ್ನ ಮಾತೆ ಹೊರಟು ಹೋಗುತ್ತಿದ್ದಾಳೆ. ನಿನ್ನನ್ನು ಆಕಾಶ ಭೂಮಿಯ ಯಜಮಾನನಾದ ಸೃಷ್ಟಿಕರ್ತನ ಕೈಗೆ ಒಪ್ಪಿಸಿ ನಾನು ಹೊರಡುತ್ತಿದ್ದೇನೆ. ಜನಿಸಿದವರೆಲ್ಲಾ ಒಮ್ಮೆ ಮರಣ ಹೊಂದಲೇ ಬೇಕು. ಆದ್ದರಿಂದ ಮಗನೇ ನೀನು ಅಳಬಾರದು.'

ಆ ಮಾತೆಯ ಮುಖವನ್ನು ನೋಡುತ್ತಿರುವಂತೆ ಅಗಲಿಕೆಯ ಆ ನಿಮಿಷಗಳಲ್ಲಿ ಕಣ್ಣೀರು ತುಂಬಿದ ಮಾತೆಯ ಮುಖವು ಅವರ ಸ್ಮೃತಿಪಟಲದಲ್ಲಿ ಅಚ್ಚಳಿಯದೆ ನಿಂತಿದೆ. ಆ ಕಾರಣದಿಂದ ಅಬ್‌ವಾ ತಲುಪಿದಾಗ ಅನುಯಾಯಿಗಳೊಂದಿಗೆ ಅನುಮತಿ ಪಡೆದು ತುಂಬಿದ ಕಣ್ಣಾಲಿಗಳೊಂದಿಗೆ ಒಂದು ಗಂಟೆಗಳ ಕಾಲ ತಂಗಿದರು. ಪುಟ್ಟ ಹಸುಳೆಯಂತೆ ಬಿಕ್ಕಿಬಿಕ್ಕಿ ಅಳುತ್ತಾ ಪ್ರವಾದಿವರ್ಯರು(ಸ) ತಾಯಿಯ ಜೊತೆ ನಡೆಸಿದ ಆತ್ಮ ಸಂಭಾಷಣೆಯು ಅನುಯಾಯಿಗಳ ಕಣ್ಣಲ್ಲಿಯೂ ನೀರು ಹರಿಯುವಂತೆ ಮಾಡಿತು. ಗಳಗಳನೆ ಅಳುತ್ತಿದ್ದ ಪ್ರವಾದಿವರ್ಯರ(ಸ) ಬಳಿಗೆ ತೆರಳಿದ ಉಮರ್(ರ), 'ಅಲ್ಲಾಹನ ಸಂದೇಶವಾಹಕರೇ! ಈ ರೀತಿ ಯಾಕೆ ಅಳುತ್ತಿದ್ದೀರಿ?' ಎಂದು ಕೇಳಿದರು.

ಆಗ ಪ್ರವಾದಿವರ್ಯರು(ಸ), 'ಇದು ನನ್ನ ಮಾತೆಯ ಗೋರಿಯಾಗಿದೆ. ಅದನ್ನು ಸಂದರ್ಶನ ನಡೆಸಲು ನನ್ನ ಪ್ರಭುವಿನೊಂದಿಗೆ ನಾನು ಯಾಚಿಸಿದ್ದೆ. ಕರುಣಾನಿಧಿಯಾದ ಆತ ನನಗೆ ಅನುಮತಿ ನೀಡಿದನು' ಎಂದರು. ಉಮರುಲ್ ಫಾರೂಕ್‌ರ ಕಣ್ಣುಗಳು ಕೂಡಾ ಹನಿಗೂಡಿತು. ಅವರು ಹೇಳಿದರು. 'ತಾವು ನಮ್ಮನ್ನೂ ಅಳುವಂತೆ ಮಾಡಿದಿರಿ ನಿಜವಾಗಿಯೂ ನಾವಂತೂ ಭಯ ಪಟ್ಟೆವು.'

ಆಗ ಪ್ರವಾದಿವರ್ಯರು(ಸ) ಅನುಯಾಯಿಗಳತ್ತ ನೋಡುತ್ತಾ, 'ಇದು ನನ್ನ

ತಾಯಿಯ ಗೋರಿಯಾಗಿದೆ. ಹಲವು ನೆನಪುಗಳು ಸ್ಮರಣೆಗೆ ಬಂದು ನನಗೆ ಅಳುವನ್ನು ನಿಯಂತ್ರಿಸಲಾಗಲಿಲ್ಲ.'

ಆರುವರ್ಷ ಮಾತ್ರ ಜೊತೆಯಿದ್ದ ಪ್ರೀತಿ ವಾತ್ಸಲ್ಯ ತುಂಬಿದ ಆ ಮಾತೆಯ ಕುರಿತ ಸ್ಮರಣೆಗಳು ಮಗನ ಮನದಲ್ಲಿ ನಿಯಂತ್ರಿಸಲಾಗದೆ ಚಿಮ್ಮಿ ಹರಿದಿತ್ತು.

## ಮಾತೃಸೇವೆಯ ಉಜ್ವಲ ಮಾದರಿ

ಅಬೂ ಇಸ್ಹಾಕ್ ಹೇಳುತ್ತಾರೆ: ಒಮ್ಮೆ ಒಂದು ರಾತ್ರಿ ನಾನು ವಿಚಿತ್ರವಾದ ಕನಸು ಕಂಡೆನು. ಆ ಕನಸಿನಲ್ಲಿ ನಾನು ಗೌರವಿಸುತ್ತಿದ್ದ ಪ್ರೀತಿಯ ಗುರುಗಳು ಪ್ರತ್ಯಕ್ಷರಾಗಿದ್ದರು. ಅವರು ನನ್ನನ್ನು ಆಶೀರ್ವದಿಸಿದರು. ಅಂಧಕಾರದಲ್ಲಿ ನಕ್ಷತ್ರಗಳು ಮಿನುಗಿದಂತೆ ಅವರ ಗಡ್ಡದಲ್ಲೂ ಮುತ್ತು-ರತ್ನ-ಹವಳಗಳಂತೆ ಹೊಳೆಯುತ್ತಿದ್ದವು. ಇದನ್ನು ನೋಡಿದ ನಾನು ಮರುದಿನ ಗುರುವರ್ಯರನ್ನು ಭೇಟಿಯಾಗಿ ಈ ವಿಷಯವನ್ನು ಪ್ರಸ್ತಾಪಿಸಿದೆ. ಆಗ ಅವರು ಆ ಕನಸನ್ನು ವಿವರಿಸುತ್ತಾ, 'ನಾನು ನನ್ನ ಗಡ್ಡದ ರೋಮಗಳಿಂದ ನನ್ನ ತಾಯಿಯ ಪಾದಗಳನ್ನು ಶುಚಿಗೊಳಿಸುತ್ತಿದ್ದೆ. ಗಡ್ಡದ ರೋಮಗಳಲ್ಲಿ ಅಂಟಿಕೊಂಡಿದ್ದ ಧೂಳು ನಕ್ಷತ್ರಗಳಂತೆ ಹೊಳೆಯುತ್ತಿರುವುದನ್ನು ನೀನು ಕನಸಲ್ಲಿ ನೋಡಿದ್ದೆ.' ಎಂದರು.

ಅಬ್ದುಲ್ಲಾ ಬಿನ್ ಮಸ್‌ಊದ್‌ರವರ ಜೊತೆ ಒಮ್ಮೆ ಅವರ ತಾಯಿ ಕುಡಿಯಲು ನೀರು ಕೇಳಿದ್ದರು. ನೀರು ತರುವಷ್ಟರಲ್ಲಿ ಅವರು ನಿದ್ರೆಗೆ ಜಾರಿದ್ದರು. ಅವರನ್ನು ನಿದ್ರೆ ಯಿಂದ ಎಬ್ಬಿಸಲು ಅವರ ಮನಸ್ಸು ಕೇಳಲಿಲ್ಲ. ಎಚ್ಚರಗೊಂಡ ಕೂಡಲೇ ನೀರು ಕೇಳ ಬಹುದು ಎಂದು ಅವರು ನಿದ್ದೆ ಮಾಡದೆ ನೀರಿನ ಪಾತ್ರೆಯನ್ನು ಹಿಡಿದು ಕಾದು ಕುಳಿತರು. ತಾಯಿ ಬೆಳಗಾಗುವ ವರೆಗೆ ನಿದ್ರಿಸಿದರು. ಅಬ್ದುಲ್ಲಾ ಬಿನ್ ಮಸ್‌ಊದ್ ರವರು ಕೂಡಾ ಬೆಳಗಾಗುವ ತನಕ ನಿದ್ರಿಸದೆ ಎಚ್ಚರದಿಂದಲೇ ಇದ್ದರು. ಅವರು ಮಾತೆಯೊಂದಿಗೆ ತೋರಿದ ಗೌರವಾದರದ ಈ ಘಟನೆಯು ಇತಿಹಾಸದಲ್ಲಿ ದಾಖಲಾಯಿತು.

## ಖಲೀಫರನ್ನೇ ಬೆರಗುಗೊಳಿಸಿದ ಪಿತೃಸ್ನೇಹ

ಉಮರುಲ್ ಫಾರೂಕ್(ರ)ರವರ ಆಡಳಿತಕಾಲದಲ್ಲಿ ಪ್ರಮುಖ ಗೋತ್ರವೊಂದರ ನಾಯಕರ ಪುತ್ರ ಕಿಲಾಬ್ ಎಂಬವರು ಮದೀನಕ್ಕೆ ಆಗಮಿಸಿದ್ದರು. ಅವರು ಬಂದು ಪ್ರವಾದಿವರ್ಯರ(ಸ) ಕೆಲವು ಶಿಷ್ಯರನ್ನು ಭೇಟಿಯಾದರು. ಅವರೆಲ್ಲರೊಡನೆ ಇಸ್ಲಾಮಿ ನಲ್ಲಿ ಶ್ರೇಷ್ಠವಾದ ಕರ್ಮ ಯಾವುದೆಂದು ಕೇಳಿದ್ದರು. ಅವರೆಲ್ಲರೂ ಅಲ್ಲಾಹನ

ಮಾರ್ಗದಲ್ಲಿನ ಜಿಹಾದ್ ಎಂದೇ ಉತ್ತರಿಸಿದ್ದರು. ಆಗ ಅವರು ಉಮರುಲ್ ಫಾರೂಕ್(ರ)ರವರೊಂದಿಗೆ 'ನನ್ನನ್ನು ಯುದ್ಧ ಭೂಮಿಗೆ ಕಳುಹಿಸಿರಿ' ಎಂದು ಕೇಳಿದ್ದರು. ಅವರು ಪರ್ಶಿಯಾದತ್ತ ಹೊರಟಿದ್ದ ಸೇನೆಯೊಂದಿಗೆ ಕಿಲಾಬ್‌ರನ್ನು ಕಳುಹಿಸಿದರು.

ಈ ವಿವರ ಅರಿತ ತಂದೆಯು ಮಗನೊಂದಿಗೆ ನಿನ್ನನ್ನು ಚಿಕ್ಕಂದಿನಲ್ಲಿ ಸಾಕಿ ಸಲಹಿದ ವೃದ್ಧ ಮಾತಾಪಿತರು ರೋಗಶಯ್ಯೆಯಲ್ಲಿರುವಾಗ ಅವರನ್ನು ತೊರೆದು ಹೋಗಲು ಕಾರಣವೇನೆಂದು ಕೇಳಿದರು. ನನಗೆ ಅಲ್ಲಾಹನಿಂದ ಅತ್ಯಂತ ಹೆಚ್ಚು ಪುಣ್ಯವನ್ನು ಗಳಿಸಬೇಕೆಂಬ ಉದ್ದೇಶದಿಂದ ನಾನು ಅವರನ್ನು ತೊರೆದು ಬಂದಿರುವೆನೆಂದು ಹೇಳಿದರು.

ಖಿಲಾಬ್‌ರ ಮಾತಾಪಿತರು ಖರ್ಜೂರದ ಮರದ ನೆರಳಿನಲ್ಲಿ ಜೀವಿಸುತ್ತಿದ್ದರು. ಅಲ್ಲಿ ಒಂದು ತಾಯಿ ಹಕ್ಕಿ ಮತ್ತು ಮರಿಗಳೂ ಆನಂದದಿಂದ ಆಡುತ್ತಿದ್ದದ್ದು ನೋಡಿ ಅವರ ಕಣ್ಣಾಲಿಗಳು ತುಂಬಿ ಹರಿದವು. ಅವರಿಗೆ ದುಃಖವನ್ನು ಸಹಿಸಲಾಗಲಿಲ್ಲ.

ಕೆಲ ಕಾಲದ ಬಳಿಕ ಅವರು ದೃಷ್ಟಿಯನ್ನು ಕಳಕೊಂಡರು. ಕೊನೆಗೆ ಅವರು ಉಮರುಲ್ ಫಾರೂಕ್‌ರ ಜೊತೆ ದೂರು ನೀಡಲು ನಿರ್ಧರಿಸಿದರು. ಮದೀನಾದ ಮಸೀದಿ ತಲುಪಿದ ಅವರು ಉಮರ್(ರ)ರವರೊಂದಿಗೆ, 'ನನ್ನ ಮಗನನ್ನು ತಾವು ನನಗೆ ಮರಳಿಸದಿದ್ದರೆ ನಿಮ್ಮ ವಿರುದ್ಧ ನಾನು ಅರಫಾದಲ್ಲಿ ಪ್ರಾರ್ಥಿಸುವೆನು' ಎಂದರು.

ತಕ್ಷಣ ಉಮರ್(ರ)ರವರು ಕಿಲಾಬ್‌ರಿಗೆ ಮರಳಿ ಬರುವಂತೆ ಹೇಳಿ ಕಳುಹಿಸಿದರು. ಬಂದ ಕೂಡಲೇ ತಮಗೆ ಮಾತಾಪಿತರ ಜೊತೆ ಇರುವ ಸಂಬಂಧಗಳ ಬಗ್ಗೆ ಪ್ರಶ್ನಿಸಿದರು. ಆಗ ಖಿಲಾಬ್ ಹೇಳಿದರು, ಒಂಟೆಗೆ ಅದರ ಮರಿಯೊಂದಿಗೆ ಹಾಲು ಕುಡಿಸಿದ ನಂತರ ನಾನು ಹಾಲು ಕರೆಯುವೆನು. ನಂತರ ನನ್ನ ತಂದೆಗೆ ಹಾಲು ಕುಡಿಸುವೆನು. ವರ್ಷಾಂತರಗಳ ಕಾಲ ನಾನು ತಂದೆಯ ಜೊತೆಯಿದ್ದ ಕಾರಣ ನಾನು ಬಂದ ಕೂಡಲೇ ನನ್ನ ವಾಸನೆಯನ್ನು ಅವರು ಗ್ರಹಿಸುವರು.

ಉಮರ್(ರ) ಇದನ್ನು ಕೇಳಿ ಆಶ್ಚರ್ಯ ಚಕಿತರಾದರು. ಖಿಲಾಬ್‌ರನ್ನು ವೃದ್ಧ ಮಾತಾಪಿತರಿಂದ ದೂರ ಮಾಡಿದ್ದಕ್ಕಾಗಿ ತೀವ್ರ ಖೇದಗೊಂಡರು. ಒಂಟೆಯೊಂದರಿಂದ ಹಾಲು ಕರೆಯುವಂತೆ ಅವರು ಆದೇಶಿಸಿದರು. ಹಾಲನ್ನು ಪಡೆದುಕೊಂಡು ಖಿಲಾಬ್ ತಂದೆಯ ಬಳಿಗೆ ತೆರಳಿದರು. ಹತ್ತಿರ ತಲುಪಿದಾಗ ವಾಸನೆಯಿಂದಲೇ ಮಗ ಬಂದಿರುವುದನ್ನು ಗ್ರಹಿಸಿದರು. 'ನನ್ನ ಪುತ್ರ ಬಂದಿದ್ದಾನೆಂದು ಹೇಳುತ್ತಾ ಎದ್ದು ನಿಂತು ಮಗನನ್ನು ಅಪ್ಪಿ ಹಿಡಿದು ಮುದ್ದಾಡಿದರು. ಈ ದೃಶ್ಯ ನೋಡಿ ಖಲೀಫಾ ಉಮರುಲ್ ಫಾರೂಖ್(ರ)ರ ಸಹಿತ ಅಲ್ಲಿ ನೆರೆದಿದ್ದವರೆಲ್ಲರೂ ಅತ್ತುಬಿಟ್ಟರು.

ತಕ್ಷಣ ಉಮರ್(ರ)ರವರು ಖಿಲಾಬ್‌ರನ್ನು ಕರೆದು ತಂದೆಯ ಜೊತೆ ಹೋಗಿ ಅವರ ಸೇವೆ ಮತ್ತು ಸಂರಕ್ಷಣೆಯಲ್ಲಿ ತೊಡಗಿಸಿಕೊಳ್ಳುವಂತೆ ಆದೇಶಿಸಿದರು. ಅವರು ಆ ತಂದೆ-ಮಗನನ್ನು ಗೌರವಾದರದಿಂದ ಬೀಳ್ಕೊಟ್ಟರು. ಅಲ್ಲಾಹನ ಮಾರ್ಗದ ಜಿಹಾದ್‌ಗಿಂತಲೂ ಮಾತಾಪಿತರ ಸೇವೆ ಎಷ್ಟೋಪಟ್ಟು ಅಧಿಕ ಮಹತ್ತರವಾದುದು ಎಂಬುವುದು ಈ ಘಟನೆಯಿಂದ ತಿಳಿದು ಬರುತ್ತದೆ.

## ಹಜ್ಜ್ ಕರ್ಮಕ್ಕಿಂತಲೂ ಶ್ರೇಷ್ಠವಾದುದು

ಇತಿಹಾಸದಲ್ಲಿ ಪ್ರಸ್ತಾಪಿಸಿದಂತೆ ತಾಯಿಯ ಸೇವೆಯು ಹಜ್ಜ್ ಕರ್ಮ ನಿರ್ವಹಿಸುವುದಕ್ಕಿಂತಲೂ ಮಹತ್ತರವಾದುದು ಎಂದು ಕೆಲವು ಘಟನೆಗಳಿಂದ ಸ್ಪಷ್ಟ ವಾಗುತ್ತದೆ. ಓರ್ವ ಪ್ರಸಿದ್ಧ ವಿದ್ವಾಂಸರಿದ್ದರು. ಅವರು ತನ್ನ ತಾಯಿಯ ಜೊತೆ ಜೀವಿಸು ತ್ತಿದ್ದರು. ಅವರಿಗೆ ಒಮ್ಮೆ ಹಜ್ಜ್ ನಿರ್ವಹಿಸುವ ಅತೀವ ಬಯಕೆಯುಂಟಾಯಿತು. ಆದರೆ ವೃದ್ಧೆಯಾಗಿದ್ದ ತಾಯಿ ಅದಕ್ಕೆ ಅನುಮತಿಸಲಿಲ್ಲ. ಆ ಮಾತೆಯ ಮಾತನ್ನು ಪಾಲಿಸಿದರೆ ಹಜ್ಜ್ ನಿರ್ವಹಿಸಲಾಗದು ಎಂದು ಆ ವಿದ್ವಾಂಸರು ಭಯಪಟ್ಟರು. ಹಾಗೆಯೇ ಅವರು ತಾಯಿಯ ಅನುಮತಿ ಪಡೆಯದೆ ಹಜ್ಜ್ ನಿರ್ವಹಿಸಲು ನಿರ್ಧರಿಸಿದರು. ವಿಷಯ ಅರಿತ ಮಾತೆಯು ಅಳುತ್ತಾ, 'ನಾನು ವಯೋವೃದ್ಧೆಯಾಗಿ ದ್ದೇನೆ. ನಿನ್ನ ಹೊರತು ನನ್ನ ಸೇವೆ ಮಾಡಲು ನನಗೆ ಯಾರಿದ್ದಾರೆ? ನೀನು ಹೋದರೆ ನಾನು ಏನು ಮಾಡಲಿ?' ಎಂದು ಹೇಳಿದರು.

ಆದರೂ ಮಾತೆಯ ಮಾತನ್ನು ಅವರು ಪಾಲಿಸಲಿಲ್ಲ. ಅಳುತ್ತಾ ಇದ್ದ ಮಾತೆಯನ್ನು ತೊರೆದು ಮಕ್ಕಾಗೆ ಅವರು ತಲುಪಿದರು. ಪ್ರಯಾಣದ ಮಧ್ಯೆ ಅವರು ಒಂದು ಮಸೀದಿಯಲ್ಲಿ ತಂಗಬೇಕಾಗಿ ಬಂತು. ಮಧ್ಯರಾತ್ರಿಯಲ್ಲಿ ಎದ್ದು ಅವರು ಪ್ರಾರ್ಥನಾ ನಿರತರಾಗಿದ್ದರು.

ಅಗ ಮಸೀದಿಯ ಪಕ್ಕದಲ್ಲಿದ್ದ ಮನೆಯೊಂದರಲ್ಲಿ ಕಳವಾಯಿತು. ಕಳ್ಳನನ್ನು ಹಿಡಿಯಲು ಜನರು ಬೆನ್ನಟ್ಟುತ್ತಾ ಹೋದರು. ಬೇರೆ ದಾರಿಯಿಲ್ಲದೆ ಕಳ್ಳ ಮಸೀದಿಯೊಳಗೆ ನುಗ್ಗಿದನು. ತಾನು ಕದ್ದುಕೊಂಡು ತಂದಿದ್ದ ವಸ್ತುಗಳನ್ನು ನಮಾಝ್‌ನಲ್ಲಿ ನಿರತರಾಗಿದ್ದ ವಿದ್ವಾಂಸರ ಬಳಿಯಲ್ಲಿರಿಸಿ, ಬೇರೊಂದು ಹಾದಿಯಲ್ಲಿ ತಪ್ಪಿಸಿಕೊಂಡು ಹೋದನು. ಕಳ್ಳ ನನ್ನು ಬೆನ್ನಟ್ಟುತ್ತಾ ಹೋದವರು ಮಸೀದಿಯೊಳಗಿನ ದೃಶ್ಯ ಕಂಡು ಬೆರಗಾದರು. ನಮಾಝ್‌ನಲ್ಲಿ ನಿರತರಾದ ವ್ಯಕ್ತಿಯ ಬಳಿ ಕಳವಾದ ವಸ್ತುವಿತ್ತು. ಅವರು ಆ ವಿದ್ವಾಂಸರ ವಿರುದ್ಧ ಎರಡು ಆರೋಪಗಳನ್ನು ಹೊರಿಸಿದರು. ವಿಚಾರಣೆ ನಡೆದ ಬಳಿಕ

ಕದ್ದ ಕಾರಣಕ್ಕಾಗಿ ಅವರ ಕೈಗಳನ್ನೂ ಕಡಿಯಬೇಕೆಂದೂ ನಮಾಝ್ ನಿರ್ವಹಿಸಿದ ಜನರನ್ನು ವಂಚಿಸಿದ್ದಕ್ಕಾಗಿ ಅವರ ಕಣ್ಣುಗಳನ್ನು ಕೀಳಬೇಕೆಂದು ತೀರ್ಮಾನ ಬಂತು.

ತೀರ್ಪು ಕೇಳಿದ ವಿದ್ವಾಂಸರು: ನೋಡಿ ನಾನು ಕಳ್ಳನಲ್ಲ, ನಾನು ಯಾವ ವಸ್ತುವನ್ನೂ ಕದ್ದಿಲ್ಲ. ಆದರೆ ನಾನು ನನ್ನ ತಾಯಿಯ ಹಕ್ಕನ್ನು ಕಬಳಿಸಿರುವೆನು. ಆದ್ದರಿಂದ ನೀವು ನನಗೆ ನೀಡಿದ ಶಿಕ್ಷೆಯು ನ್ಯಾಯವಾದುದು. ನಾನು ಅದಕ್ಕೆ ಅರ್ಹನು ಎಂದು ಹೇಳಿದರು.

ಆದರಿಂದ ಅವರು ನಿರಪರಾಧಿ ಎಂಬುದು ಬಹಿರಂಗವಾಯಿತು.



# ನಮ್ಮ ಆತ್ಮವಿಮರ್ಶೆಗೆ ಕೆಲವು ಪ್ರಶ್ನೆಗಳು

ನೀವು ನಿಮ್ಮ ಮಾತಾಪಿತರನ್ನು ಗಾಢವಾಗಿ, ಪ್ರಾಮಾಣಿಕತೆಯಿಂದ, ನಿಷ್ಕಲ್ಮಶಭಾವದಿಂದ ಪ್ರೀತಿಸುತ್ತಿದ್ದೀರಾ? ಅವರಿಗಾಗಿ ನಿಮ್ಮ ಎಲ್ಲಾ ಇಷ್ಟಗಳನ್ನು ತ್ಯಾಗ ಮಾಡಲು ಸಿದ್ಧರಿದ್ದೀರಾ? ಈ ಭೂಮಿಯಲ್ಲಿ ನೀವು ಅತ್ಯಂತ ಹೆಚ್ಚು ಯಾರನ್ನು ಇಷ್ಟಪಡುತ್ತಿದ್ದೀರಿ? ತಂದೆ ತಾಯಿಯರನ್ನೋ ಅಥವಾ ಹೆಂಡತಿ ಮಕ್ಕಳನ್ನೋ? ಅಥವಾ ಸ್ವತಹ ನಿಮ್ಮನ್ನೇ ಇಷ್ಟಪಡುತ್ತಿದ್ದೀರಾ? ನೀವು ಯಾರ ಹಿತಾಸಕ್ತಿಗೆ ಹೆಚ್ಚು ಪ್ರಾಧಾನ್ಯತೆ ನೀಡುತ್ತಿದ್ದೀರಿ?

ವೃದ್ಧರಾದ ಮಾತಾಪಿತರ ಸೇವೆ ಮಾಡಲು ನೀವು ಸಮಯ ಮೀಸಲಿಟ್ಟಿದ್ದೀರಾ? ಅವರನ್ನು ಸಂತೃಸಲು ಸಂತೋಷಪಡಿಸಲು ನೀವು ಶ್ರಮಿಸಿದ್ದೀರಾ? ವಾರ್ಧಕ್ಯದ ಕಾರಣದಿಂದ ಬಳಲುತ್ತಿರುವ ಮಾತಾಪಿತರ ಕೈಕಾಲುಗಳನ್ನು ಪೂಸಿ ನೇವರಿಸುತ್ತೀರಾ? ಅವರ ಬೆನ್ನನ್ನು ಸವರುತ್ತೀರಾ? ಅವರಿಗೆ ಪ್ರಾಥಮಿಕ ಅಗತ್ಯಗಳನ್ನು ಈಡೇರಿಸಲು ಸಾಧ್ಯವಾಗದೇ ಇದ್ದಾಗ, ಅದನ್ನು ನಿರ್ವಹಿಸಲು ಹೋಗುವಾಗ ಮನದಲ್ಲಿ ಅಸಹ್ಯ ಭಾವನೆ ಉಂಟಾಗುತ್ತದೆಯೇ? ಅವರನ್ನು ಆಸ್ಪತ್ರೆಗೆ ದಾಖಲಿಸುವಾಗ, ವೈದ್ಯರೊಂದಿಗೆ ಭೇಟಿ ಮಾಡಿಸುವಾಗ, ಅದಕ್ಕಾಗಿ ಗಂಟೆಗಟ್ಟಲೆ ಕಾದು ನಿಂತಾಗ, ಹಣವನ್ನು ಅವರಿಗಾಗಿ ವ್ಯಯಿಸುವಾಗ ಮನದಲ್ಲಿ ಅಸ್ವಸ್ಥತೆ ಮತ್ತು ಅಸಹ್ಯ ಭಾವ ನಿಮ್ಮಲ್ಲಿ ಉಂಟಾಗುವುದೇ? ಅಥವಾ ತನಗೆ ತನ್ನ ಮಾತಾಪಿತರ ಸೇವೆ ಮಾಡಲು ಸಂರಕ್ಷಿಸಲು ಈ ಸದವಕಾಶ ದೊರೆತಿರುವುದು ಅಲ್ಲಾಹನಿಂದ ಸಿಕ್ಕಿರುವ ಅನುಗ್ರಹವೆಂದು ಭಾವಿಸಿ ನೀವು ಅತೀವ ಸಂತೋಷ ಮತ್ತು ಸಂತೃಪ್ತಿಯಿಂದ ಅದನ್ನು ಪ್ರಯೋಜನಪಡಿಸುತ್ತೀರಾ?

ನೀವು ವಿವಾಹಿತರಾಗಿದ್ದರೆ ತಂದೆ ತಾಯಂದಿರ ಜೊತೆ ಸಮಾಲೋಚನೆ ನಡೆಸಿ ಅವರ ಒಪ್ಪಿಗೆ ಪಡೆದು ಸಂತೋಷದಿಂದ ವಿವಾಹವಾಗಿದ್ದೀರಾ? ನಿಮ್ಮ ಬಾಳ ಸಂಗಾತಿಯೊಡನೆ ನೀವು ತಂದೆ ತಾಯಿಯರ ಜೊತೆ ವರ್ತಿಸುವ ರೀತಿಯ ಕುರಿತು ಎಂದಾದರೂ ಮಾತನಾಡಿದ್ದೀರಾ? ನಿಮಗೆ ನಿಮ್ಮ ತಂದೆ ತಾಯಂದಿರ ಜೊತೆ ವರ್ತಿಸಿದಂತೆಯೇ

ನಿಮ್ಮ ಬಾಳ ಸಂಗಾತಿಯ ತಂದೆ ತಾಯಂದಿರ ಜೊತೆ ವರ್ತಿಸಲು, ಅವರಿಗೆ ಗೌರವಾದರ ನೀಡಲು ಸಾಧ್ಯವಾಗಿದೆಯೇ? ನಿಮ್ಮ ಬಾಳ ಸಂಗಾತಿ ನಿಮ್ಮ ಮಾತಾಪಿತರನ್ನು ಸ್ವತಃ ತನ್ನ ತಂದೆ ತಾಯಿಯಂತೆ ಪರಿಗಣಿಸುತ್ತಿದ್ದಾಳೆಯೇ ಅಥವಾ ನಿಮ್ಮಿರ್ವರ ವಿವಾಹ ದೊಂದಿಗೆ ಈ ಇಬ್ಬರು ಮಾತಾಪಿತರು ನಾಲ್ಕು ಅಜ್ಜಿ ಅಜ್ಜಂದಿರು ಇರುವಂತಹ ಅನು ಭವ ನಿಮಗಾಗುತ್ತಿದೆಯೇ?

ಅವಿವಾಹಿತ ಅಥವಾ ಅವಿವಾಹಿತೆಯಾಗಿರುವ ಸ್ಥಿತಿಯಲ್ಲಿ, ತಂದೆ ತಾಯಂದಿರ ಅನುಮತಿ ಮತ್ತು ಒಪ್ಪಿಗೆಯೊಂದಿಗೆ ಮಾತ್ರ ವಿವಾಹವಾಗುವುದಾಗಿ ನೀವು ನಿರ್ಧರಿಸಿದ್ದೀರಾ? ಮನೆಯಿಂದ ಹೊರಡುವಾಗ ತಂದೆ ತಾಯಿಯಿಂದ ಅನುಮತಿ ಪಡೆದು ಹೋಗುತ್ತಿದ್ದೀರಾ? ಸಲಾಮ್ ಹೇಳುತ್ತಾ ಹಸ್ತದಾನ ಮಾಡುತ್ತಾ ಹೊರಡು ತ್ತೀರಾ? ಪ್ರಮುಖ ನಿರ್ಧಾರ ತಾಳುವಾಗ ಅವರೊಂದಿಗೆ ಸಮಾಲೋಚನೆ ನಡೆಸುತ್ತಿ ದ್ದೀರಾ? ಹಾಗೆ ಮಾಡಲು ಬಾಳ ಸಂಗಾತಿಯ ಜೊತೆ ಹೇಳುತ್ತಿದ್ದೀರಾ? ತಂದೆ ತಾಯಿಯ ಮೇಲೆ ಕೋಪಗೊಳ್ಳುತ್ತೀರಾ? ಅವರ ಮನಸ್ಸಿಗೆ ನೋವಾಗುವಂತಹ ಮಾತುಗಳನ್ನಾಡುತ್ತಿರಾ? ಮಾನಸಿಕವಾಗಿ ನೀವು ಅವರನ್ನು ನೋಯಿಸಿದ್ದೀರಾ? ದುರು ಗುಟ್ಟಿ ನೋಡಿದ್ದೀರಾ? ಉಚ್ಚ ಸ್ವರದಲ್ಲಿ ಗದರಿಸಿ ಮಾತನಾಡಿದ್ದೀರಾ? ಅವರ ಆದೇಶ ಗಳನ್ನು ಉಲ್ಲಂಘಿಸಿದ್ದೀರಾ? ಅವರ ಅಗತ್ಯಗಳನ್ನು ಈಡೇರಿಸಿದ್ದೀರಾ?

ತಂದೆ ತಾಯಂದಿರು ಸ್ವರ್ಗದ ಬಾಗಿಲುಗಳು ಎಂಬುದನ್ನು ನೀವು ಅರ್ಥೈಸಿದ್ದೀರಾ? ಅಲ್ಲಾಹನ ಸಂಪ್ರೀತಿ ಬಯಸಿ ತಂದೆ ತಾಯಂದಿರ ಸೇವೆ ಮಾಡುತ್ತಿದ್ದೀರಾ? ಅವರೊಂದಿಗೆ ಕೃತಜ್ಞತೆ ವ್ಯಕ್ತಪಡಿಸುತ್ತಿದ್ದೀರಾ?

ತಂದೆ ತಾಯಂದಿರ ವಾರ್ಧಕ್ಯ ಸಹಜವಾದ ಗುಣಗಳು, ವರ್ತನೆಗಳು ನಿಮಗೆ ಅಸಹ್ಯವಾಗಿ ಕಾಣುತ್ತಿದೆಯೇ? ಅವರು ಅದನ್ನು ಹಲವು ಬಾರಿ ಪುನರಾವರ್ತಿಸಿದರೆ ನಿಮ್ಮ ಪ್ರತಿಕ್ರಿಯೆ ಹೇಗಿರುತ್ತದೆ? ಸಹನೆ ಮತ್ತು ಸಂಯಮ ಪಾಲಿಸುತ್ತೀರಾ? ಅವರು ನಿಮ್ಮೊಂದಿಗೆ ಕೋಪಗೊಂಡರೆ, ನಿಮ್ಮ ಮೇಲೆ ಹರಿಹಾಯ್ದರೆ ಅಥವಾ ನಿಮ್ಮ ಮೇಲೆ ಆರೋಪ ಹೊರಿಸಿದರೆ ಆಗ ನೀವು ಅದೇ ರೀತಿ ಅವರ ಜೊತೆ ವರ್ತಿಸುತ್ತಿದ್ದೀರಾ? ನೀವು ಯಾರೊಂದಿಗಾದರೂ ನಿಮ್ಮ ತಂದೆ ತಾಯಂದಿರ ವಿರುದ್ಧ ಟೀಕೆ ಮಾಡುತ್ತೀರಾ? ನಿಮ್ಮ ಪತ್ನಿ, ಮಕ್ಕಳ ಜೊತೆಗಾದರೂ ಟೀಕೆ ಮಾಡುತ್ತಿದ್ದೀರಾ ಅಥವಾ ಅವರ ಬಗ್ಗೆ ಉತ್ತಮ ಮಾತುಗಳನ್ನಾಡುತ್ತಾ, ಅವರ ಬಗ್ಗೆ ಇನ್ನಷ್ಟು ಗೌರವಾದರಗಳು ಹೆಚ್ಚುವಂತೆ ಪ್ರಯತ್ನಿ ಸುತ್ತೀರಾ? ಅವರ ಮಾತುಗಳನ್ನು ವರ್ತನೆಗಳನ್ನು ಚಟುವಟಿಕೆಗಳನ್ನು ಸಹನೆಯಿಂದ

ಹೃದಯ ವೈಶಾಲ್ಯದೊಂದಿಗೆ ಕಾಣಲು ಸ್ವತಃ ನಿಮ್ಮನ್ನು ನೀವು ಸಿದ್ದಗೊಳಿಸಿದ್ದೀರಾ?

ನೀವು ಚಿಕ್ಕಂದಿನಲ್ಲಿರುವಾಗ ನಿಮಗಾಗಿ ಅವರು ಸಹಿಸಿದ ತ್ಯಾಗ, ಸಂಕಷ್ಟಗಳನ್ನು ಸ್ಮರಿಸಿದ್ದೀರಾ? ಆ ನೆನಪಲ್ಲಿ ನಿಮ್ಮ ಮನಸ್ಸು ಕೃತಜ್ಞತೆಯಿಂದ ತುಂಬಿ ತುಳುಕುತ್ತಿಲ್ಲವೇ?

ನೀವು ಮನೆಯಿಂದ ದೂರದಲ್ಲಿದ್ದರೆ ಮೊದಲು ನೀವು ಯಾರೊಡನೆ ಫೋನ್‌ನಲ್ಲಿ ಮಾತನಾಡುತ್ತೀರಿ? ತಂದೆ ತಾಯಂದಿಯರೊಡನೆಯೋ ಅಥವಾ ಬಾಳ ಸಂಗಾತಿಯ ಜೊತೆಗೋ? ಹಾಗೆಯೇ ಹೊಸ ಬಟ್ಟೆ ಬರೆಗಳನ್ನು ಖರೀದಿಸುವಾಗ ಮೊದಲ ಪ್ರಾಶಸ್ತ್ಯ ತಂದೆ ತಾಯಿಯರಿಗೋ ಅಥವಾ ಬಾಳ ಸಂಗಾತಿಗೋ? ಯಾರಿಗೆ ನೀಡುತ್ತೀರಿ? ಪತ್ನಿಯ ಮಾತು ಕೇಳಿ ನೀವು ತಂದೆತಾಯಂದಿರನ್ನು ದ್ವೇಷಿಸುತ್ತೀರಾ ಅಥವಾ ಅವರಿಂದ ದೂರವಿರುತ್ತೀರಾ ಅಥವಾ ಅವರ ಮೇಲೆ ಆರೋಪ ಹೋರಿಸುತ್ತೀರಾ?

ಇನ್ನು ನೀವು ಸೊಸೆಯ ಸ್ಥಾನದಲ್ಲಿದ್ದರೆ ನಿಮ್ಮ ಬಾಳ ಸಂಗಾತಿಯು ತನ್ನ ತಂದೆ ತಾಯಂದಿರನ್ನು ಪ್ರೀತಿಸಿ ಸಂರಕ್ಷಣೆ ಮಾಡುವಾಗ ನೀವು ಸಂತೋಷಪಡುತ್ತೀರಾ? ಅಥವಾ ನೀವು ಅಸಹ್ಯ ಪಡುತ್ತಿದ್ದೀರಾ? ತನ್ನ ಬಾಳ ಸಂಗಾತಿಯ ತಂದೆ ತಾಯಂದಿರ ಮೇಲೆ ಆರೋಪ ಹೊರಿಸಿ ನೀವು ಎಂದಾದರೂ ಮಾತನಾಡಿದ್ದೀರಾ? ಅವರ ತಂದೆ ತಾಯಿಯ ಮೇಲೆ ಅವರಿಗೆ ಇರುವ ಪ್ರೀತಿ ವಾತ್ಸಲ್ಯವನ್ನು ನೀವು ಹೆಚ್ಚಿಸಲು ಪ್ರಯತ್ನಿಸಿ ದ್ದೀರಾ ಅಥವಾ ಕಡಿಮೆಗೊಳಿಸಲು ಪ್ರಯತ್ನಿಸಿದ್ದೀರಾ? ತನ್ನ ಪತಿಯನ್ನು ತಾಯಿಯಿಂದ ದೂರ ಮಾಡಲು ಪ್ರಯತ್ನಿಸಿದ್ದೀರಾ? ಅವರಿಗೆ ಹೆಚ್ಚು ಬಾಧ್ಯತೆಗಳು ಇರುವುದು ತನ್ನ ಮಾತಾಪಿತರೊಂದಿಗೆ ಎಂಬ ವಾಸ್ತವವನ್ನು ನೀವು ಅರಿತಿಲ್ಲವೇ? ಅವರ ಮಾತಾಪಿತರಿಗಿಂತ ಹೆಚ್ಚಿನ ಮಹತ್ವ ನಿಮಗೆ ಸಿಗಬೇಕೆಂದು ನೀವು ಹಠ ಹಿಡಿಯುತ್ತಿದ್ದೀರಾ? ನಿಮ್ಮ ಕಾರಣ ದಿಂದಾಗಿ, ನಿಮ್ಮ ಪತಿಯು ಅವರ ತಂದೆ ತಾಯಿಯ ಜೊತೆ ಕೆಟ್ಟದಾಗಿ ವರ್ತಿಸುವ ಮೂಲಕ, ಅಲ್ಲಾಹನ ಕೋಪ ಮತ್ತು ಶಿಕ್ಷೆಗೆ ಗುರಿಯಾಗುವಂತೆ ಮಾಡಬಾರದೆಂಬ ಉತ್ಕಟೇಚ್ಛೆ ನಿಮ್ಮಲ್ಲಿಲ್ಲವೇ?

ನಿಮ್ಮ ಕಾರಣದಿಂದ ನಿಮ್ಮ ತಂದೆ ತಾಯಂದಿರ ಅಥವಾ ನಿಮ್ಮ ಬಾಳ ಸಂಗಾತಿಯ ತಂದೆ ತಾಯಿಯರ ಕಣ್ಣಾಲಿಗಳು ದುಃಖದಿಂದ ತುಂಬುತ್ತಿವೆಯೇ? ಅವರ ಹೃದಯಗಳು ಚಡಪಡಿಸುತ್ತಿವೆಯೇ? ಮನಸ್ಸು ನೊಂದು ಸೊರಗುತ್ತಿದೆಯೇ?

ಕೊನೆಯದಾಗಿ ನೀವು ಪ್ರತಿ ದಿನ ನಿಮ್ಮ ಮಾತಾಪಿತರನ್ನು ಎಷ್ಟು ಬಾರಿ ಸ್ಮರಿಸು ತ್ತೀರಿ. ಅವರಿಗಾಗಿ ಪ್ರಾರ್ಥಿಸುತ್ತೀರಿ?

